# ಆನಂದ ಸಾಮ್ರಾಜ್ಯ

ಲೇಖಕ

**ಮೂಗೂರು ಹನುಮಂತಾಚಾರ್ಯ**

ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್
೧೯೩೮

[ ಬೆಲೆ ೧೦ ಆಣೆ ]

# ಮುನ್ನುಡಿ

ನಮ್ಮ ಭರತಖಂಡವು ಅನೇಕ ವಿಚಾರಗಳಿಗೆ ತವರು ಮನೆಯಾಗಿರುವಂತೆಯೇ ಕಥೆಗಳಿಗೂ ತವರು ಮನೆಯಾಗಿರುವುದು. ನಮ್ಮ **ಪಂಚತಂತ್ರವೂ ಹಿತೋಪದೇಶವೂ** ಅನೇಕ ಶತಮಾನಗಳ ಹಿಂದೆಯೇ ಪ್ರಪಂಚದ ಎಲ್ಲ ಭಾಗಗಳಿಗೂ ವ್ಯಾಪಿಸಿ ಯುರೋಪಿನಲ್ಲಿಯ ಪ್ರತಿ ಭಾಷೆಯಲ್ಲಿಯೂ ನೆಲೆಗೊಂಡಿರುವುವು. ಆದರೆ, ಈ ತೆರದ ಕಥೆಯು ನಮ್ಮಲ್ಲಿರುವಂತೆ, ಹುಟ್ಟಿದಂತೆಯೇ ಇರದೆ, ತನ್ನ ಹೊಸ ನೆಲೆಯಲ್ಲಿ ಕ್ರಮೇಣ ಸರ್ವತೋಮುಖವಾಗಿ ಬೆಳೆದು, ಈಗ ಆಬಾಲವೃದ್ಧರ ಬೇಸರವನ್ನು ಕಳೆಯುವುದಕ್ಕೂ ಜ್ಞಾನಾರ್ಜನೆಗೂ ಅತ್ಯಂತ ಸಹಕಾರಿಯಾಗಿರುವುದು. ನಮ್ಮ ಕಥೆಗಳು ಕೇವಲ ನೀತಿ ಬೋಧೆಗಾಗಿ ಬರೆದುವು; ನಿರ್ಜೀವ ವಸ್ತುಗಳೂ ಪಶು ಪಕ್ಷಿಗಳೂ ಭೂತ ಭೇತಾಳಗಳೂ ದೇವತೆಗಳೂ ರಾಕ್ಷಸರೂ, ಸಾಮಾನ್ಯವಾಗಿ, ನಮ್ಮ ಕಥೆಗಳಲ್ಲಿಯ ಪಾತ್ರಗಳು. ಹೊಸ ರೀತಿಯ ಕಥೆಗಳು ಕೇವಲ ಪ್ರಾಪಂಚಿಕವಾಗಿದ್ದು ಮನುಷ್ಯನ ನಾನಾ ಬಗೆಯ ಚೇಷ್ಟೆಗಳನ್ನು ಸ್ವಾಭಾವಿಕವಾದ ರೀತಿಯಲ್ಲಿ ಚಿತ್ರಿಸುವುವು. **ನಾವೆಲು**ಗಳೆಂಬ ಇಂತಹ ಕಥೆಗಳು ಪಾಶ್ಚಾತ್ಯ ಲೇಖಕರ ಅಸಾಧಾರಣವಾದ ಪಾಂಡಿತ್ಯದಿಂದ ಜನರಿಗೆ ಬೋಧಪ್ರದವಾಗಿಯೂ, ಸಾಹಿತ್ಯ ದೃಷ್ಟಿಯಿಂದ ಉತ್ತಮ ವರ್ಗಕ್ಕೆ ಸೇರಿದುವಾಗಿಯೂ ಇರುವುವು. ಆದರೆ ಎಲ್ಲ ನಾವೆಲುಗಳೂ ಇದೇ ರೀತಿಯಾಗಿರುವುವೆಂದು ಮಾತ್ರ ಭಾವಿಸಲಾಗದು. ಈ ನಾವೆಲುಗಳಲ್ಲಿ ಸಾಮಾನ್ಯವಾಗಿ ಮುಖ್ಯ ಪಾತ್ರವು ಹೆಂಗುಸು: ಶಕ್ತಿದೇವತೆಯಲ್ಲವೆ?

ಈಚೆಗೆ ನಮ್ಮ ದೇಶದಲ್ಲಿಯೂ ಈ ತೆರದ ಕಥೆಗಳು ರೂಢಿಗೆ ಬಂದಿವೆ. ಬಂಗಾಳದ ಬಂಕಿಂ ಚಂದ್ರ ಚಟ್ಟೋಪಾಧ್ಯಾಯರವರು ಮಾರ್ಗದರ್ಶಿಗಳಾದರು. ಅವರ ನಾವೆಲುಗಳನೇಕವನ್ನು ಮೈಸೂರಿನ ಬಿ. ವೆಂಕಟಾಚಾರ್ಯರು ಕನ್ನಡಕ್ಕೆ ಪರಿವರ್ತಿಸಿದರು. ಈಗ ಕರ್ಣಾಟಕದಲ್ಲಿ ಸುಪ್ರಸಿದ್ಧ ನಾವೆಲುಕಾರರು ಹಾವೇರಿಯ ವೇಂಕಟೇಶ ತಿರಕೋ ಕುಲಕರಣಿ ಗಳಗನಾಥರವರು. ನಮ್ಮ ದೇಶದಲ್ಲಿ ನಾವೆಲಿಗೆ ಇನ್ನೂ ತ್ರಾಣ ಬಂದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಅವು ಲಕ್ಷಾಂತರಗಟ್ಟಲೆಯಾಗಿ ಪ್ರಕಟವಾಗುತ್ತ ಅವನ್ನು ಓದುವುದು ಪುರುಷರಿಗೂ ಸ್ತ್ರೀಯರಿಗೂ ಸಾಮಾನ್ಯವಾಗಿ ನಿತ್ಯ ವಿಧಿಯಂತಿರುವುದು.

ಪ್ರಕೃತ ಗ್ರಂಥವು ಈ ಜಾತಿಗೆ ಸೇರಿದುದು. ಮುಖ್ಯ ಪಾತ್ರವು ರಾಜ ಭೋಗವನ್ನನುಭವಿಸಬೇಕೆಂಬ ಬಯಕೆಯುಳ್ಳ ಸ್ತ್ರೀ ವ್ಯಕ್ತಿ. ಈ ಸ್ತ್ರೀಯು ತನ್ನ ಉದ್ದೇಶ ಸಾಧನೆಗಾಗಿ ಗಂಡನನ್ನು ಸುಲಭವಾಗಿ ಮರುಳುಗೊಳಿಸಿ ತಮ್ಮ ದೇಶದ ದೊರೆಯನ್ನು ಕೊಲ್ಲಿಸಲು ಯತ್ನಿಸುವಳು. **ಕೋಹಿನೂರ್** ಎಂಬ ರತ್ನವಿದ್ದವನಲ್ಲಿ ರಾಜತ್ವವು ನೆಲೆಗೊಂಡಿರುವುದೆಂಬ ಗಾಳಿವಾತಿನಲ್ಲಿ ನಂಬಿಕೆಯನ್ನಿಟ್ಟು ಆ ರತ್ನವನ್ನು ಸಂಪಾದಿಸಬೇಕೆಂಬುದೇ ಈ ಕೊಲೆಯ ಉದ್ದೇಶ. ಗಂಡನು ಈ ಪ್ರಯತ್ನದಲ್ಲಿ ಫಲ ಹೊಂದದೆ, ಆ ದೊರೆಯ ಅಸಾಧಾರಣವಾದ ಸೌಜನ್ಯದಿಂದ ಅವನ ಅಂಗರಕ್ಷಕನಾಗುವನು. ಇದನ್ನು ತಿಳಿದು ಹೆಂಡಿತಿಯು ಬಹಳ ಅಸಮಾಧಾನ ಹೊಂದಿ ಗಂಡನೊಡನೆ ಕೇವಲ ನಿಷ್ಠುರ ವಾಕ್ಯಗಳನ್ನಾಡಿ ತಾನೇ ಆ ಕೆಲಸವನ್ನು ಮಾಡುವೆನೆಂದು ಹೊರಡುವಳು. ಗಂಡುಡಿಗೆಯನ್ನುಟ್ಟು ಎಷ್ಟೋ ಧೈರ್ಯದಿಂದಿದ್ದರೂ, ಸ್ತ್ರೀಗೆ ಸಹಜವಾದ ಗುಣಗಳು ಹೊರಬಿದ್ದು, ಆಕೆಯು ಮೋಸಗಾರರ ಬಲೆಗೆ ಸಿಕ್ಕಿ ಬಹಳ ವ್ಯಥೆಯನ್ನನುಭವಿಸುವಳು. ಕೊನೆಗೆ, ಯಾವ ದೊರೆಯನ್ನು ಕೊಲ್ಲಬೇಕೆಂಬ ಪ್ರತಿಜ್ಞೆಯಿಂದ ಆಕೆ ಹೊರಟಿದ್ದಳೋ ಆತನಿಂದಲೇ ಬಂಧ ವಿಮೋಚನೆಯನ್ನು ಹೊಂದಿ, ಪತಿಯನ್ನು ಸೇರಿ ಹಿಂದಣ ಸುಖ ಸಾಮ್ರಾಜ್ಯವನ್ನು ಪಡೆಯುವಳು.

ಈ ಕಥೆಯನ್ನು ಮ|| ರಾ|| ಶ್ರೀ ಹನುಮಂತಾಚಾರ್ಯರು ಬಹಳ ಚೆನ್ನಾಗಿ ಹೇಳಿದ್ದಾರೆ. ಅವರ ವರ್ಣನೆಗಳೂ ಸಂಸಾರದ ಚಿತ್ರವೂ ಸಹಜವಾಗಿವೆ. ಭಾಷೆಯು ಲಲಿತವಾಗಿಯೂ ನಿರ್ದುಷ್ಟವಾಗಿಯೂ ಇದೆ. ಮುಖ್ಯವಾಗಿ, ಈ ಕಥೆಯಲ್ಲಿ ಮುಹಮ್ಮದೀಯ ದೊರೆಯಾದ ಬಾಬರನನ್ನು ಒಂದು ಪಾತ್ರವನ್ನಾಗಿ ಮಾಡಿ ಆತನು ತನ್ನ ಹಿಂದೂ ಪ್ರಜೆಗಳಲ್ಲಿ ತೋರಿಸುತ್ತಿದ್ದ ಅಸದೃಶವಾದ ಪ್ರೀತಿಯನ್ನು ಅಷ್ಟು ಚೆನ್ನಾಗಿ ವರ್ಣಿಸಿರುವುದು ನಮ್ಮ ದೇಶ ಬಾಂಧವರಾದ ಮುಹಮ್ಮದೀಯರಿಗೂ ಹಿಂದೂಗಳಿಗೂ ಸೌಹಾರ್ದವನ್ನು ಹುಟ್ಟಿಸುವುದಕ್ಕೆ ಬಹಳ ಸಹಕಾರಿಯಾಗಿದೆ. ಈ ಕಥೆಯನ್ನು ಕನ್ನಡಿಗರೆಲ್ಲರೂ ಆದರದಿಂದ ಓದಿ ಗ್ರಂಥಕರ್ತರ ಶ್ರಮವನ್ನು ಸಾರ್ಥಕಗೊಳಿಸುವರೆಂದು ಹಾರೈಸುತ್ತೇನೆ.

ಬೆಂಗಳೂರು
ಪ್ರಮೋದೂತ ಸಂವತ್ಸರದ
ವೈಶಾಖ ಶುದ್ಧ ಪಂಚಮಿ

**ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ.**

# ಮೊದಲನೆಯ ಮುದ್ರಣದ ಪೀಠಿಕೆ

ಕರ್ಣಾಟಕ ಭಾಷಾ ಮಾತೆಯ ಸೇವೆಯನ್ನು ಮಾಡಲೆಳಸಿ ''ಅಳಿಲ ಭಕ್ತಿ ಮಳಲ ಸೇವೆ'' ಎಂಬ ಲೋಕೋಕ್ತಿಗನುಸಾರವಾಗಿ ಈ ಕಾದಂಬರಿಯನ್ನು ಅಲ್ಪಜ್ಞನಾದ ನಾನು ಬರೆದು ಮುಗಿಸಿದೆನು. ಆದರೆ ಕರ್ಣಾಟಕ ಭಾಷಾ ವಿಶಾರದರಾದ ಅನೇಕ ಮಹನೀಯರು ಬರೆದಿರುವ ರತ್ನ ಸದೃಶಗಳಾದ ಗ್ರಂಥಗಳನ್ನು ಪಠಿಸಿದ ವಾಚಕ ಮಹಾಶಯರಿಗೆ ಈ ನನ್ನ ಬರಹವು ಅತಿ ತುಚ್ಛವಾಗಿ ಗೋಚರಿಸುವುದೇನೂ ಅಚ್ಚರಿಯಲ್ಲ. ಕಮಲೋದ್ಭವಕ್ಕೆ ಕರ್ದಮವು ಸ್ವಲ್ಪ ಸಹಾಯ ಮಾಡುವುದೆಂದು ಜ್ಞಾನಿಗಳು ಹೇಳುವರು. ಅದರಂತೆ ಸರ್ವ ಸಮ ಭಾವವನ್ನು ತೋರಿಸಿ ಕರ್ದಮದಲ್ಲಿರುವ ಅತ್ಯಲ್ಪ ಗುಣಗಳನ್ನೇ ಆದರದಿಂದ ಸ್ವೀಕರಿಸಿ ಈ ಕಾದಂಬರಿಯಲ್ಲಿ ವಿವರಿಸಿರುವ ಜಾಜರ ಮಹಾಶಯನ ನಿರ್ವೈರಯುಕ್ತವಾದ ಘನೌದಾರ್ಯ, ಪರೋಪಕಾರ ತತ್ಪರತೆ, ಪ್ರಮದಾಕುಮಾರಿಯ ಸುಗುಣಗಳು, ಆನಂದಸಿಂಹನ ನಡತೆ ಮುಂತಾದುವುಗಳಿಗಾದರೂ ಮನವಿತ್ತು ಈ ಗ್ರಂಥವನ್ನು ಆಮೂಲಾಗ್ರವಾಗಿ ಪಠಿಸಿದರೆ ನನ್ನೀ ಅಲ್ಪ ಸೇವೆಯು ಸಾರ್ಥಕವಾಯಿತೆಂದು ಭಾವಿಸುವೆನು.

ಈ ಪುಸ್ತಕಕ್ಕೆ ಶ್ರೀ ಶೇಷಾಚಲ ಸಂಸ್ಥೆಯ ಚಾಲಕರು ಆಶ್ರಯ ಕೊಟ್ಟದ್ದಕ್ಕಾಗಿ ಅವರಿಗೆ ಕೇವಲ ಕೃತಜ್ಞನಾಗಿದ್ದೇನೆ.

ವಿದ್ವಜ್ಜನರ ಪಾದರೇಣು,

ವಿಭವ ಸಂ॥ ದ ಚೈತ್ರ ಶುದ್ಧ ಷಷ್ಠೀ ಬುಧವಾರ

**ಮೂಗೂರು ಹನುಮಂತಾಚಾರ್ಯ,**
ಮುಖ್ಯೋಪಾಧ್ಯಾಯ,
ಪ್ರಾಥಮಿಕ ಪಾಠಶಾಲೆ, ಆನವಟ್ಟಿ.

# ದ್ವಿತೀಯ ಮುದ್ರಣದ ಪೀಠಿಕೆ

ಈ ಪುಸ್ತಕದ ಪ್ರಥಮ ಮುದ್ರಣದಲ್ಲಿ ಮುದ್ರಣದ ಮತ್ತು ಇತರ ದೋಷಗಳಿದ್ದುದರಿಂದ ಪಂಡಿತರಿಂದ ಪರಿಶೋಧಿಸಲ್ಪಟ್ಟು ಈ ದ್ವಿತೀಯ ಮುದ್ರಣವಾಗಿರುತ್ತದೆ. ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರು ಇದರಲ್ಲಿರುವ ದೋಷಗಳನ್ನು ತಿದ್ದಿಕೊಟ್ಟು ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಮಹದುಪಕಾರಮಾಡಿರುವರು; ಅಲ್ಲದೆ, ಮುದ್ರಣದ ಕಾರ್ಯದಲ್ಲಿಯೂ ಕೇವಲ ಸಹಾಯಮಾಡಿರುವರು. ಇದಕ್ಕಾಗಿ ಅವರಿಗೆ ನಾನು ಬಹಳ ಕೃತಜ್ಞನಾಗಿರುವೆನು.

ಈ ಪುಸ್ತಕವನ್ನು ಮೈಸೂರು 'ಟೆಕ್ಸ್ಟ್‌ಬುಕ್ ಕಮಿಟಿ'ಯವರು ಪರಿಶೀಲಿಸಿ ಇಲ್ಲಿಯ ಐದನೆಯ ಫಾರಮ್ಮಿಗೆ ಪಠ್ಯಪುಸ್ತಕವನ್ನಾಗಿ ಅಂಗೀಕರಿಸಿರುವುದರಿಂದ ನಾನು ಆ ಕಮಿಟಿಯವರಿಗೆ ಅತ್ಯಂತ ಕೃತಜ್ಞನಾಗಿರುವೆನು.

ಬೆಂಗಳೂರು ಪ್ರೆಸ್ಸಿನ ಮ್ಯಾನೇಜರವರು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಸಕಾಲಕ್ಕೆ ಪ್ರತಿಗಳನ್ನು ಒದಗಿಸಿಕೊಟ್ಟುದಕ್ಕಾಗಿ ಅವರ ಉಪಕಾರವನ್ನು ಸ್ಮರಿಸಿ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು.

ಶ್ರೀ ಗರಣಿ ಕೆ. ತಿಮ್ಮಣ್ಣಾಚಾರ್ಯ, ಎಂ.ಎ., ಬಿ.ಟಿ. ಅವರು ಇದರ ಮುದ್ರಣದ ಕಾರ್ಯಕ್ಕೆ ಸಮಯೋಚಿತವಾದ ಸಲಹೆಗಳನ್ನು ಕೊಟ್ಟು ಮಹದುಪಕಾರ ಮಾಡಿರುವುದರಿಂದ ಅವರಿಗೆ ನನ್ನ ಅನೇಕ ವಂದನೆಗಳನ್ನು ಸಮರ್ಪಿಸುವೆನು.

ಇತಿ

ಆನವಟ್ಟಿ,
೧೯೩೦ನೆಯ ಮೇ ೩ನೆಯ ತಾ||

ವಿದ್ವಜ್ಜನ ಪಾದರೇಣು,
**ಮೂಗೂರು ಹನುಮಂತಾಚಾರ್ಯ.**

# ಆನಂದ ಸಾಮ್ರಾಜ್ಯ

---

## ಮೊದಲನೆಯ ಪರಿಚ್ಛೇದ




ಭಾಗೀರಥೀ ನದಿಗೆ ಉಪನದಿಯಾಗಿ ನೀಲ ಶೀತಲ ಜಲ ಕಲ್ಲೋಲಿನಿಯಾದ ಯಮುನಾ ನದಿಯ ತಟಾಕ, ಉಭಯ ಪಾರ್ಶ್ವಗಳಲ್ಲಿಯೂ ಗಗನ ಚುಂಬಿತ ವೃಕ್ಷಗಳು, ನಿಬಿಡವಾದ ಅರಣ್ಯದಲ್ಲಿ ನೈಸರ್ಗಿಕವಾದ ಅತ್ಯಾನಂದ, ವನ್ಯ ಕುಸುಮಗಳ ಸುಗಂಧ, ಮಂದ ಮಾರುತನ ಶೀತಲ ಸ್ಪರ್ಶ, ಕಲ್ಲೋಲಿನಿಯ ಮಧುರ ನಿನಾದ, ಪಿಕ ಮಯೂರಾದಿ ಪಕ್ಷಿ ಕುಂಜಗಳ ಕಲಕಲಾ ರವದಿಂದುಂಟಾದ ಅನುಪಮೇಯ ಸಂಗೀತ ಧ್ವನಿ, ನವ ಕುಸುಮಗಳ ಪ್ರಫುಲ್ಲ ಸೌಂದರ್ಯ, ಪಲ್ಲವಾದಿಗಳ ಅಕೃತ್ರಿಮವಾದ ವಿಚಿತ್ರ ವರ್ಣ, ನಿರ್ಮಲವಾದ ನೀಲಾಕಾಶ ಪಟದ ವಸ್ತ್ರಾಚ್ಛಾದನ, ವನ ವಿಹಾರಿಗಳಾದ ಪುರಂಧ್ರಿಯರ ನಿಷ್ಕಲ್ಮಷವಾದ ಮಂಜುಳ ಧ್ವನಿ—ಇತ್ಯಾದ್ಯನೇಕ ಆನಂದ ಸಂದೋಹವು ಎಲ್ಲೆಲ್ಲಿಯೂ ತುಂಬಿ ತುಳುಕಾಡುತ್ತಿದ್ದಿತು. ಹೇ ಯಮುನೇ! ನೀನೇ ಧನ್ಯಳು. ಆ ಶ್ರೀ ಕೃಷ್ಣನ ಪಾದಾರವಿಂದಗಳನ್ನು ತೊಳೆದು ಪುನೀತಳಾಗಿರುವೆಯಾದುದರಿಂದಲೇ ನಿನ್ನ ತಟಾಕದ ಇರ್ಕಡೆಗಳಲ್ಲಿಯೂ ನಿತ್ಯಾನಂದ. ಈ ಆನಂದವು ಆಚಂದ್ರಾರ್ಕ ಸ್ಥಾಯಿಯಾಗಿರಲಿ.

ಕ್ರಿಸ್ತ ಶಕದ ೧೫೨೭–೨೮ನೆಯ ವರ್ಷದಲ್ಲಿ ಯಮುನಾ ನದಿಯು ಮೇಲೆ ವರ್ಣಿಸಿದಂತೆ ಮನೋಹರವಾದ ವೃಕ್ಷ ರಾಶಿಯಿಂದಲೂ ನಾನಾ ವಿಧವಾದ ಪೈರು ಪಚ್ಚೆಗಳಿಂದಲೂ ನಯನ ಮನೋಹರವಾಗಿದ್ದಿತು; ಈಗಲೂ ಹಾಗೆಯೇ ಶೋಭಿಸುತ್ತಿರುವುದು. ಈಗ ಯಾವ ಸ್ಥಳದಲ್ಲಿ

ಲೋಕ ಪ್ರಸಿದ್ಧವಾದ 'ತಾಜಾ ಮಹಲ್' ಕಟ್ಟಡವು ಶೋಭಿಸುತ್ತಲಿದೆಯೋ ಆ ಸ್ಥಳದಲ್ಲಿ ಆಗಿನ ಕಾಲದಲ್ಲಿ ನಿಬಿಡವಾದ ವನ ಪ್ರದೇಶವು ಸರ್ವಾಧಿಪತ್ಯ ಮಾಡುತ್ತ ನಲಿದಾಡುತ್ತಿದ್ದಿತು. ಆ ಕಾಲವು ಮೊಗಲ ಸಾಮ್ರಾಜ್ಯದ ಆದಿ ಭಾಗ. ಯಮುನಾ ನದಿಯ ಎಡ ಪಕ್ಕದಲ್ಲಿ, ಈಗಿನ ತಾಜಾ ಮಹಲು ಇರುವ ಸ್ಥಳದಲ್ಲಿಯೇ, ಸ್ವಲ್ಪ ಎತ್ತರವಾದ ದಿಣ್ಣೆಯೊಂದಿದ್ದಿತು; ಇದನ್ನನುಸರಿಸಿ ಮುಂದೆ ಹೋದರೆ ಅಲ್ಲೊಂದು ಸಾಧಾರಣವಾದ ಗುಡಿಸಿಲು; ಅದರ ಸುತ್ತಲೂ ಅಂದವಾದ ಒಂದು ಪುಷ್ಪೋದ್ಯಾನ; ಗುಡಿಸಿಲು ಸಾಮಾನ್ಯವಾದುದಾದರೂ ಪರಿಷ್ಕಾರವಾಗಿದ್ದಿತು.

ಒಂದು ದಿನ ಪ್ರಾತಃಕಾಲ ಸೂರ್ಯದೇವನು ತನ್ನ ಸ್ವರ್ಣ ವರ್ಣದ ಕಿರಣಗಳನ್ನು ಈ ಗುಡಿಸಿಲಿನ ಮೇಲೂ ಸುತ್ತಲಿರುವ ಪುಷ್ಪ ವಾಟಿಕೆಯ ಮೇಲೂ ಯಮುನಾ ನದಿಯ ಮೇಲೂ ಪಸರಿಸಿ ಕ್ರೀಡಿಸುತ್ತಿದ್ದನು. ಲತಾ ವನಿತೆಯರು ಆಗ ತಾನೆ ಅರಳಿದ ಕುಸುಮ ಭಾರದಿಂದ ನಮ್ರೀಭೂತರಾಗಿ ಮಂದ ಹಾಸದಿಂದ ದಿನ ನಾಥನಿಗೆ ತಮ್ಮ ವಂದನೆಗಳನ್ನರ್ಪಿಸುತ್ತಿದ್ದರು. ನಾನಾ ವಿಧವಾದ ಖಗ ಸಮೂಹವು ಇಂಪಾದ ದನಿಗೈಯುತ್ತ ಮೇವನ್ನು ಹುಡುಕಲೋಸುಗ ನಾನಾ ದಿಕ್ಕುಗಳಿಗೆ ಬಹಳ ವೇಗದಿಂದ ಹಾರಿಹೋಗುತ್ತಿದ್ದುವು. ಇಂತು ಮನೋಹರವಾದ ಪ್ರಭಾತದಲ್ಲಿ ಒಬ್ಬ ಮುದುಕಿಯು ನಾಲ್ಕೈದು ವರ್ಷ ವಯಸ್ಸಿನ ಸುಂದರನಾದ ಬಾಲಕನನ್ನೆತ್ತಿಕೊಂಡು, ಆ ಕುಟೀರದ ಮುಂಭಾಗದಲ್ಲಿ ಕುಳಿತು, ಮನೋಹರವಾದ ಪ್ರಭಾತದ ಸೃಷ್ಟಿ ಸೌಂದರ್ಯವನ್ನು ನೋಡುತ್ತಿದ್ದಳು. ಉದ್ಯಾನದಲ್ಲೊಬ್ಬ ತರುಣಿಯು ಹೂಗೊಯ್ಯುತ್ತ, ಆ ಹೂಗಳಿಂದ ನಾನಾ ವಿಧವಾದ ಮಾಲೆಗಳನ್ನು ಮಾಡಿ ತಾವು ವಾಸವಾಗಿದ್ದ ಆ ಕುಟೀರವನ್ನಲಂಕರಿಸುತ್ತ, ಮಧ್ಯೇ ಮಧ್ಯೇ ಮಗುವನ್ನು ನೋಡಿ ಮಂದಹಾಸವನ್ನು ಬೀರುತ್ತ ತಿರುಗಾಡುತ್ತಿದ್ದಳು. ಆ ಸಮಯದಲ್ಲಿ ಆ ಮಗುವು ಮುದುಕಿಯನ್ನು ನೋಡಿ ತನ್ನ ಪುಟ್ಟ ಬೆರಳನ್ನು ಒಂದು ಕಡೆಗೆ ತೋರಿಸಿ, ಅಮ್ಮಾ, ಅಲ್ಲಿ! ಅಲ್ಲಿ! ಆ ದಿಟ್ಟಿ (ಜಿಟ್ಟೆ ಹುಳು) ಚೆನ್ನಾಗಿದೆ ಎಂದು ತೊದಲು ಮಾತುಗಳಿಂದ ನಗುತ್ತ ಹೇಳಿತು.

ಮುದುಕಿಯು ಮಗುವಿನ ಬೆನ್ನು ತಟ್ಟುತ್ತ, "ಎಲೋ ಪೋರ! ನೋಡು, ನೋಡು, ಚೆನ್ನಾಗಿ ನೋಡು; ನಾನೂ ನೋಡಿದೆನು" ಎಂದು ಮಗುವಿನ ಕೆನ್ನೆಯ ಮೇಲೆ ಮೆಲ್ಲನೆ ಒಂದೇಟು ಕೊಟ್ಟು, ಬೇರೆಯ ಕಡೆಗೆ ತನ್ನ ಮುಖವನ್ನು ತಿರುಗಿಸಿಕೊಂಡಳು. ಮಗುವು ಮರಳಿ ಮರಳಿ ಅದನ್ನೇ ನೋಡುತ್ತ, ತನ್ನ ಮುದ್ದು ಕೈಗಳಿಂದ ಅದನ್ನೇ ತೋರಿಸುತ್ತ, ಅಜ್ಜೀ! ಅಜ್ಜೀ! ನೋಡೆ, ನೋಡೆ ಎಂದು ಹೇಳುತ್ತಲೇ ಇದ್ದಿತು. ಮುದುಕಿಗೆ ಬೇಸರವಾಯಿತು. ಅವಳು, "ಎಲೋ! ನೀನು ಬಹಳ ತುಂಟನಾದೆ; ಇನ್ನು ಮುಂದೆ ಹೀಗೆ ಮಾಡಿದರೆ ನಿನ್ನನ್ನು ಚೆನ್ನಾಗಿ ಹೊಡೆಯುತ್ತೇನೆ" ಎಂದು ಮೆಲ್ಲಗೆ ಒಂದೇಟುಕೊಟ್ಟಳು. ಹೂವೆತ್ತುತ್ತಿದ್ದ ತರುಣಿಯೂ ಮುಗುಳ್ನಗೆಯಿಂದ ಮಗುವಿನ ಮುದ್ದು ಮೊಗವನ್ನು ನೋಡುತ್ತ, "ಅಹುದಮ್ಮಾ! ಅವನು ಬರಬರುತ್ತ ಬಹಳ ದುಷ್ಟನಾದನು; ಇನ್ನೂ ಒಂದೇಟು ಹಾಕು" ಎಂದಳು. ವೃದ್ಧೆಯು, "ನೋಡಿದೆಯಾ ಮಗೂ! ನಿಮ್ಮಮ್ಮನೂ ಹಾಗೆಯೇ ಹೇಳುತ್ತಾಳೆ. ನೀನು ಕೆಟ್ಟ ಹುಡುಗನಾಗಬೇಡ. ಈ ದಿನ ನಿಮ್ಮಪ್ಪ ಬರಲಿ; ಅವಳಿಗೇ ಏಟು ಕೊಡಿಸೋಣ. ಮುದ್ದುಮಗು ನೀನು! ನಿನಗೇಕಪ್ಪಾ ಏಟು?" ಎಂದು ಗಲ್ಲವನ್ನು ಹಿಡಿದು ಮುದ್ದಿಸಿದಳು. ಅಷ್ಟರಲ್ಲಿ ಹೂಗೊಂಚಲುಗಳ ಮೇಲೆ ಹಾರಾಡುತ್ತಿದ್ದ ಚಿಟ್ಟೆ ಹುಳು ಹಾರಿಹೋಯಿತು; ಎಲ್ಲಿಯೂ ಕಾಣಿಸಲಿಲ್ಲ. ಮಗುವು, "ಅಜ್ಜೀ! ಹೋಯಿತು! ಹಾರಿ ಹೋಯಿತು!" ಎಂದನು.

ಮುದುಕಿ—ಏನು ಹೋಯಿತು? ಎಲ್ಲಿ ಹೋಯಿತು?

ಮಗು—ಚಿಟ್ಟೆ ಹುಳು ಹೋಯಿತು.

ಮುದುಕಿ—(ತರುಣಿಯ ಕಡೆಗೆ ತಿರುಗಿ) ಕುಮಾರೀ! ಏನು! ನಿನ್ನ ಕೆಲಸವಾಯಿತೊ?

ಕುಮಾರಿ—ಇನ್ನೂ ಇಲ್ಲ.

ಹೀಗೆಂದು ಹೇಳಿ ತರುಣಿಯು ಮಗುವಿನ ಬಳಿಗೆ ಬಂದು, "ಈ ಚೋರನು ಬಹಳ ಹೆಚ್ಚಿಹೋಗಿದ್ದಾನೆ; ಇನ್ನುಮುಂದೆ ಇವನ

ಸೇವಾ ಕಾರ್ಯಗಳು ನಡೆಯಬೇಕಾಗಿವೆ" ಎಂದು ಮಗುವನ್ನೆತ್ತಿ ಕೊಂಡು ಮುದ್ದಿಟ್ಟಳು. ಮುದುಕಿಯು, "ಇವನು ಇಷ್ಟು ತುಂಟ ನಾಗುವುದಕ್ಕೆ ತಾಯಿ ತಂದೆಗಳೇ ಕಾರಣರು; ಅಲ್ಲವೇನೊ? ಸ್ವಲ್ಪ ತಾಳು; ನಿಮ್ಮಪ್ಪನು ಈ ಹೊತ್ತು ಬರುತ್ತಾನೆ; ಅವನ ಮುಂದೆ ನಿನ್ನ ತುಂಟತನವನ್ನೆಲ್ಲ ಹೇಳಿ ಪೆಟ್ಟು ಹಾಕಿಸುತ್ತೇನೆ" ಎಂದು ಕೋಪ ಗೊಂಡವಳಂತೆ ನಟಿಸುತ್ತ ಹುಬ್ಬು ಗಂಟಿಕ್ಕಿದಳು. ಪಾಪ ಪುಣ್ಯಗಳ ಭೀತಿಯನ್ನೇ ಅರಿಯದೆ ನಿಷ್ಕಲ್ಮಷ ಹೃದಯವುಳ್ಳ ಆ ಮುದ್ದು ಮಗುವು, ಕೋಪದಿಂದ ಕೂಡಿದ ತನ್ನ ಅಜ್ಜಿಯ ಮುಖವನ್ನು ನೋಡಿ ಸ್ವಲ್ಪ ಬೆದರಿ, ಆಕೆಯ ಕುತ್ತಿಗೆಯನ್ನು ತನ್ನ ಎರಡು ಕೈಗ ಳಿಂದಲೂ ಹಿಡಿದು, "ಅಜ್ಜೀ! ಅಜ್ಜೀ! ಅಪ್ಪನು ಬಂದರೆ ನಿನ್ನನ್ನು ಹೊಡೆಯುವುದಿಲ್ಲವೇನು? ನಿನ್ನನ್ನು ಯಾರೂ ಹೊಡೆಯುವವರೇ ಇಲ್ಲವೋ?" ಎಂದು ಕೇಳಿದನು. ಮುದುಕಿಯು ಈ ಮಾತುಗಳನ್ನು ಕೇಳಿ, ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಈ ಮಗುವು ತನ್ನನ್ನು ಈ ರೀತಿ ಯಾಗಿ ಕೇಳಿದುದಕ್ಕೂ ಅವನ ಚುರುಕಾದ ಬುದ್ಧಿಗೂ ಅತ್ಯಾನಂದ ಪಡುತ್ತ ಹತ್ತಾರು ಬಾರಿ ಮುತ್ತಿಟ್ಟುಕೊಂಡಳು. ಈ ಬಾಲಲೀಲೆ ಯನ್ನು ನೋಡುತ್ತಿದ್ದ ಕುಮಾರಿಯೂ ಮುತ್ತಿನ ಮಳೆಯಲ್ಲಿ ಮಗುವನ್ನು ಮುಚ್ಚಿಬಿಟ್ಟಳು. ಇದಲ್ಲವೆ ಮಾತೃವಾತ್ಸಲ್ಯ! ಯಾವ ಮಕ್ಕಳು ಬುದ್ಧಿವಂತರಾಗಿಯೂ ಎಲ್ಲರ ಪ್ರೀತಿಗೆ ಪಾತ್ರರಾಗಿಯೂ ಮಾತಾ ಪಿತೃಗಳನ್ನು ಸರ್ವ ವಿಧದಲ್ಲಿಯೂ ಸಂತೋಷಪಡಿಸತಕ್ಕವ ರಾಗಿಯೂ ಇರುತ್ತ, ತಮ್ಮ ಮುದ್ದು ಮಾತುಗಳಿಂದಲೂ ಬಾಲಲೀಲೆ ಗಳಿಂದಲೂ ಆನಂದಪಡಿಸುತ್ತಿರುವರೋ ಅಂತಹ ಮಕ್ಕಳೇ ಮಕ್ಕಳು! ಅಂತಹ ಮಕ್ಕಳನ್ನು ಪಡೆದ ಜನನಿಯರೇ ಧನ್ಯರು! ಆ ಜನನಿಯರಿಗೆ ತಮ್ಮ ಮಕ್ಕಳ ಲಾಲನೆ ಪಾಲನೆಗಳಿಂದ ಎಷ್ಟು ಆನಂದೋದ್ರೇಕವಾಗು ವುದೋ ಅದನ್ನು ಅವರೇ ಬಲ್ಲರು. ಹೇ! ಭೂಜನನೀ! ನೀನು ಬಹು ಪುತ್ರವತಿ. ನಿನ್ನ ಮುದ್ದುಮಕ್ಕಳಲ್ಲಿ ನಿನ್ನ ಸಂಪೂರ್ಣಾನಂದಕ್ಕೂ ಆಶೀರ್ವಾದಕ್ಕೂ ಪಾತ್ರರಾದವರು ಎಷ್ಟು ಮಂದಿ ಇರಬಹುದು? ಈಗಿನ ನವ ನಾಗರಿಕ ಕಾಲದಲ್ಲಿ ಲೆಕ್ಕಿಸಿ ನೋಡಿದರೆ ಅತ್ಯಲ್ಪ ಸಂಖ್ಯೆಯಿರಬಹು

ದಲ್ಲವೆ? ಇದರಿಂದ ನಿನಗೆ ಆನಂದವುಂಟಾಗುವುದೇ? ಎಂದಿಗೂ ಇಲ್ಲ; ಏಕೆಂದರೆ, ಸ್ವಾರ್ಥವನ್ನು ಒಂದು ಕಡೆ ತೆಗೆದಿಟ್ಟು, ತಾವು ತಮ್ಮ ಮಾತೃ ಭೂಮಿಯ ಸೇವೆಗಾಗಿಯೇ ಜನ್ಮವೆತ್ತಿರುವೆವೆಂದು ತಿಳಿದು, ಮಾತೃ ಸೇವಾ ನಿರತರಾಗಿರುವುದೇ ಮುಖ್ಯ ಧ್ಯೇಯವೆಂದು ತ್ರಿಕರಣ ಶುದ್ಧಿ ಯಿಂದ ಆಚರಿಸತಕ್ಕ ಮಹನೀಯರು ಎಲ್ಲಿಯೋ ಅಲ್ಪ ಸಂಖ್ಯಾಕರಿರಬಹು ದೆಂದು ಧಾರಾಳವಾಗಿ ಹೇಳಬಹುದು. ಇದು ಹಾಗಿರಲಿ; ಮುದುಕಿಯು ಮಗುವನ್ನು ನೋಡುತ್ತ, "ರಂಗೀಲಾಲ್! ಈ ದಿವಸ ಇಲ್ಲಿಗೆ ಬಹು ಜನರು ಬರುತ್ತಾರೆ; ಆಗ ಮಾತ್ರ ನಿನ್ನ ತುಂಟತನವನ್ನು ತೋರಿಸಬೇಡ, ಕಂಡೆಯಾ?"

ಮಗು.—ಯಾರು ಯಾರು ಬರುತ್ತಾರೆ ಅಜ್ಜೀ?

ಮುದುಕಿ.—ನಿಮ್ಮಪ್ಪನು, ಅವನ ಸ್ನೇಹಿತರು ನಾಲ್ಕಾರು ಮಂದಿ.

ಮಗು.—(ಚಪ್ಪಾಳೆ ತಟ್ಟುತ್ತ) ಹಾಗಾದರೆ ಈ ಹೊತ್ತು ಬಹಳ ತಮಾಷೆ!

ಅಷ್ಟರೊಳಗೆ ದೂರದಲ್ಲಿ ಒಬ್ಬ ಹೆಂಗುಸೂ, ಒಬ್ಬ ಗಂಡುಸೂ ಬರುತ್ತಿರುವುದು ಕಾಣಿಸಿತು. ಮಗುವು ಆ ದಾರಿಯ ಕಡೆಗೆ ನೋಡುತ್ತ, "ಅದೋ! ಅಲ್ಲಿ ಬರುವವರು ಯಾರು?" ಎಂದು ಕೇಳಿದನು. ಅಷ್ಟರಲ್ಲಿ ದಾರಿಗರಿಬ್ಬರೂ ಸಮೀಪಕ್ಕೆ ಬಂದರು. ಹೆಂಗುಸು ನಾನಾ ವಿಧವಾದ ಕಾಯಿ ಪಲ್ಯಗಳನ್ನೂ, ಗಂಡುಸು ಹಾಲು, ಮೊಸರು, ಬೆಣ್ಣೆಗಳನ್ನೂ ತಂದಿದ್ದರು. ಮುದುಕಿಯು ಅವರು ತಂದ ಪದಾರ್ಥಗಳನ್ನು ಸರಿಯಾದ ಬೆಲೆಗೆ, ಕೊಂಡುಕೊಂಡು, ಬೆಲೆಯ ಹಣವನ್ನು ಕೊಟ್ಟಳು. ಅವರಿಬ್ಬರೂ ಹೊರಟು ಹೋದರು. ಈ ಅವಕಾಶದಲ್ಲಿ, ಎಲ್ಲಿಯೋ ಹೊರಗೆ ಹೋಗಿದ್ದ ಕುಮಾರಿಯ ಸ್ನೇಹಿತಳೊಬ್ಬಳು ಅಲ್ಲಿಗೆ ಬರಲು, ಆಕೆಯೂ ಕುಮಾ ರಿಯೂ ಸೇರಿ ಮಧ್ಯಾಹ್ನದ ಅಡಿಗೆಯನ್ನು ಮಾಡಲು ಕುಟೀರದೊಳಗೆ ಹೊರಟುಹೋದರು. ಅಲ್ಲಿ ಇದುವರೆಗೂ ನಿದ್ದೆ ಮಾಡುತ್ತಿದ್ದ ಆರು ವರ್ಷದ ಬಾಲಿಕೆಯೊಬ್ಬಳು ಆಗ ಎಚ್ಚತ್ತು ಹೊರಗೆ ಬಂದಳು. ಆ ಬಾಲಿಕೆಯೊಡನೆಯೂ ಬಾಲಕನೊಡನೆಯೂ ಮುದುಕಿಯು ವಿನೋದ ವಾಗಿ ಕಾಲಹರಣ ಮಾಡುತ್ತಿದ್ದಳು. ಅಡಿಗೆಯ ಮನೆಯಲ್ಲಿ ಅನೇಕ

ವಿಧವಾದ ಭಕ್ಷ್ಯ ಭೋಜ್ಯಾದಿಗಳು ಘಮ ಘಮಿಸುತ್ತಿದ್ದುವು. ಅದರ ಸುವಾಸನೆಯಿಂದ ಬಾಯಿಯಲ್ಲಿ ನೀರೂರುವಂತಿದ್ದಿತು. ಪರಿಷ್ಕರಿಸಿದ ಪದಾರ್ಥಗಳೆಲ್ಲವೂ ಆ ಆ ಸ್ಥಳಗಳಲ್ಲಿ ಅಣಿಮಾಡಿಟ್ಟಿದ್ದುವು. ಆಗ ಹನ್ನೊಂದು ಗಂಟೆಯು ಹೊತ್ತು. ಕುಮಾರಿಯು ಆಗಾಗ ಹೊರಗೆ ಬಂದು, ದೂರದಲ್ಲಿ ಯಾರಾದರೂ ಬರುತ್ತಿರುವರೋ ಏನೋ ಎಂದು ನೋಡುತ್ತ, ಯಾರೂ ಕಾಣದಿರುವುದರಿಂದ ನಿರಾಶಳಾಗುತ್ತ ಓಡಾಡುತ್ತಿದ್ದಳು. ಹನ್ನೆರಡು ಗಂಟೆ ಹೊಡೆಯಿತು; ಆದರೂ ಒಬ್ಬರೂ ಬರಲಿಲ್ಲ. ಕುಮಾರಿಯು ಮಾರ್ಗ ನಿರೀಕ್ಷೆ ಮಾಡಿ ಸಾಕಾಗಿ ಕೈಯಲ್ಲೊಂದು ಪಾತ್ರೆಯನ್ನು ಹಿಡಿದುಕೊಂಡು ಯಮುನಾ ನದಿಯ ಕಡೆಗೆ ಹೊರಟಳು. ನದಿಯಲ್ಲಿಳಿದು ನೀರು ತುಂಬಿಕೊಂಡು ಹಿಂದಿರುಗಿ ಬರುವಾಗ ನದಿಯ ಪಕ್ಕದಲ್ಲಿದ್ದ ಮರಗಳ ಗುಂಪಿನಲ್ಲಿ ಯಾರೋ ಇಬ್ಬರು ನಡೆದು ಬರುವ ಶಬ್ದವಾಯಿತು. ಕುಮಾರಿಯು ಆ ಕಡೆಗೆ ನೋಡಲು, ಒಬ್ಬ ಬೈರಾಗಿಯೂ ಅವನ ಶಿಷ್ಯನೊಬ್ಬನೂ ಬರುತ್ತಿದ್ದರು. ಅವರು ಬರಬರುತ್ತ ಕುಮಾರಿಯ ಸಮೀಪಕ್ಕೇ ಬಂದರು. ಕುಮಾರಿಯು ಬೈರಾಗಿಯನ್ನು ಗುರ್ತಿಸಿ, "ತಾವು ಅಪ್ಪಣೆ ಕೊಡಿಸಿದಂತೆ ಬಂದಂತಾಯಿತು" ಎಂದು ನಮಸ್ಕರಿಸಿದಳು. ಬೈರಾಗಿಯು, "ಮಗಳೇ, ನಿನಗೆ ಕಲ್ಯಾಣವಾಗಲಿ. ನಾನು ಹಿಂದೆ ನಿನ್ನೊಡನೆ ಹೇಳಿದ ಮೇರೆಗೆ ಬಂದಿರುವೆನು. ಅಲ್ಲದೆ, ಇಗೋ ನೋಡು! (ಎಂದು ಶಿಷ್ಯನನ್ನು ತೋರಿಸಿ) ನಿನ್ನ ಪತಿಯನ್ನು ಕರೆತಂದಿರುವೆನು" ಎಂದು ಹೇಳಿ ಅವನ ಗಡ್ಡ, ಮೀಸೆ ಮುಂತಾದ ಕೃತ್ರಿಮ ವೇಷವನ್ನೆಲ್ಲ ತಾನೇ ತೆಗೆದುಹಾಕಿದನು. ಕುಮಾರಿಯು ತನ್ನ ಪತಿಯನ್ನು ಕಾಣುತ್ತಲೆ ಲಜ್ಜೆಯಿಂದ ತಲೆ ತಗ್ಗಿಸಿ, ಆನಂದವು ಮುಖದಲ್ಲಿ ಉಕ್ಕಿಬರುತ್ತಿರಲು, ಕಾಲ್ಬೆರಳಿನಿಂದ ನೆಲವನ್ನು ಕೆರೆಯುತ್ತ ಸುಮ್ಮನೆ ನಿಂತಳು.

## ಎರಡನೆಯ ಪರಿಚ್ಛೇದ

ಚರಿತ್ರೆಯಲ್ಲಿ ಪ್ರಸಿದ್ಧವಾಗಿ ಐಶ್ವರ್ಯದಲ್ಲಿಯೂ ಸೌಂದರ್ಯದಲ್ಲಿಯೂ ಅದ್ವಿತೀಯವಾದ ಡೆಲ್ಲೀ ಪಟ್ಟಣಕ್ಕೆ ಹತ್ತು ಹರಿದಾರಿಯ ದೂರದಲ್ಲಿ ಪ್ರಶಸ್ತವಾದ ಒಂದು ಹಳ್ಳಿ; ಇದು ಹಳ್ಳಿಯಾದರೂ ಜನ ಭರಿತವಾಗಿಯೂ, ಆಗ್ರಾ ಮತ್ತು ಡೆಲ್ಲೀ ಪಟ್ಟಣಗಳಿಗೆ ಹೋಗುವ ರಾಜ ಮಾರ್ಗಗಳು ಸೇರುವ ಸ್ಥಳದಲ್ಲಿಯೇ ಇದ್ದುದರಿಂದ ಸಾಮಾನ್ಯ ಪಟ್ಟಣಕ್ಕಿಂತ ಯಾವ ಭಾಗದಲ್ಲಿಯೂ ಕಡಿಮೆಯಿಲ್ಲದೆಯೂ ಇದ್ದಿತು. ಈ ಗ್ರಾಮದ ಒಂದು ಪಾರ್ಶ್ವದಲ್ಲಿ ಅಂದವಾದ ಒಂದು ಉದ್ಯಾನವಿದ್ದಿತು. ಇದಕ್ಕೆ ಸಮೀಪವಾಗಿಯೇ ಒಂದು ಸತ್ರ; ಈ ಸತ್ರವು ಮಾರ್ಗಕ್ಕೆ ಹೊಂದಿಕೊಂಡು ಪ್ರಯಾಣಸ್ಥರಿಗೆ ಎಲ್ಲ ಭಾಗಗಳಲ್ಲಿಯೂ ಅನುಕೂಲವಾಗಿದ್ದಿತು. ಈ ಧರ್ಮಶಾಲೆಯಲ್ಲಿ ನಾನಾ ಸ್ಥಳಗಳಿಂದ ಪ್ರಯಾಣಿಕರು ಬಂದು ತಂಗುತ್ತಿದ್ದರು. ಸಾಯಂಕಾಲವಾಗುತ್ತಲೆ ಅಲ್ಲಿಯ ಜನ ಸಂದಣಿಯು ಅಪರಿಮಿತವಾಗಿ, ಅವರಲ್ಲಿ ನಾನಾ ವಿಧವಾದ ಹಾಸ್ಯ ವಿನೋದಗಳು ನಡೆಯುತ್ತಿದ್ದುವು: ಕೆಲವರು ಸಂಗೀತ ಹೇಳುವವರು; ಕೆಲವರು ಆತ್ಮ ಪೌರುಷವನ್ನು ಕೊಚ್ಚಿಕೊಳ್ಳುವವರು; ಕೆಲವರು ಶೂರರಾದ ಪೂರ್ವಿಕರ ಕಥೆಗಳನ್ನು ಹೇಳುವವರು; ಕೆಲವರು ಇವನ್ನೆಲ್ಲ ಕೇಳುವವರು. ಇಷ್ಟೇ ಅಲ್ಲದೆ ಇನ್ನೂ ಅನೇಕ ವಿಷಯ ವಿಮರ್ಶೆಗಳು ಅಲ್ಲಿ ನಡೆಯುತ್ತಿದ್ದುವು. ಅವುಗಳಿಗೆ ತುದಿ ಮೊದಲೇ ಇರಲಿಲ್ಲ.

ಧರ್ಮಶಾಲೆಯು ಪಶ್ಚಿಮಾಭಿಮುಖವಾಗಿದ್ದಿತು. ಅದರ ಮುಂಭಾಗದ ಎರಡು ಪಕ್ಕಗಳಲ್ಲಿಯೂ ಎರಡು ಅಂಗಡಿಗಳು: ಒಂದು ಹಿಂದೂಗಳದು, ಒಂದು ಮುಹಮ್ಮದೀಯರದು. ಇವುಗಳಲ್ಲಿ ಎಲ್ಲ ದಿನಸುಗಳೂ, ಆಯಾ ಮತಸ್ಥರಿಗೆ ಬೇಕಾಗುವ ಆಹಾರ ಪದಾರ್ಥಗಳೂ ಮಾರಲ್ಪಡುತ್ತಿದ್ದುವು. ಹಿಂದೂ ಅಂಗಡಿಯ ಯಜಮಾನನು ಗೋಧಿಯ ರೊಟ್ಟಿಯನ್ನು ಕಾವಲಿಯ ಮೇಲೆ ಸುಡುತ್ತಿದ್ದನು; ಒಬ್ಬ ಹುಡುಗನು ರೊಟ್ಟಿಯನ್ನು ಲಟ್ಟಿಸುತ್ತಿದ್ದನು. ಮುಸಲ್ಮಾನರ ಅಂಗಡಿಯಲ್ಲಿಯೂ ಮೂರು ನಾಲ್ಕು ಮಂದಿ ರೊಟ್ಟಿಯನ್ನು ಸುಡುತ್ತಿದ್ದರು; ಮತ್ತೊಂದು ಭಾಗದಲ್ಲಿ, ಅವರ ಜನಗಳಿಗೆ ಪ್ರೀತ್ಯಾಸ್ಪದವಾದ 'ಕಬಾಬ್' ಎಂಬ

ಮಾಂಸಾಹಾರವು ಸಿದ್ಧವಾಗುತ್ತಿದ್ದಿತು. ಒಬ್ಬ ಪ್ರೌಢ ಸ್ತ್ರೀಯು ಅಲ್ಲಿಂದಿಲ್ಲಿಗೆ ಓಡಾಡುತ್ತ ಮೇಲ್ವಿಚಾರಣೆ ತೆಗೆದುಕೊಳ್ಳುತ್ತಿದ್ದಳು. ಸಂಜೆಯಾದುದರಿಂದ ಪ್ರಯಾಣಿಕರ ಸಂಖ್ಯೆಯು ಕ್ರಮೇಣ ಹೆಚ್ಚಾಗುತ್ತಿದ್ದಿತು. ಅಂಗಡಿಗಳ ಮುಂದೆ ಬಹು ಜನರು ನೆರೆದಿದ್ದರು. "ಖಾರಾ ಸೇವ್ ಕೊಡು, ರೊಟ್ಟೀ ಕೊಡು, ತುಪ್ಪಾ ಹಾಕು, ನನಗೆ ಮೊದಲು ಕೊಡು" ಎಂಬ ಮಾತುಗಳ ಗಡಿಬಿಡಿ, ಅಂಗಡಿಯವರಿಗೆ ತಡಬಡದ ಓಡಾಟ, ಬೆಲೆಯ ಹಣವನ್ನು ತೆಗೆದುಕೊಳ್ಳುವ ಸಂಭ್ರಮ. "ಇದು ಮೋಸದ ನಾಣ್ಯ, ಬೇರೆ ಕೊಡು; ಚಿಲ್ಲರೆ ಕೊಡು"—ಇವೇ ಮೊದಲಾದ ಕೋಲಾಹಲವು ಮಿತಿಮಿರಿದ್ದಿತು. ಮುಸಲ್ಮಾನರ ಅಂಗಡಿಗೆ ನಾಲ್ಕಾರು ಜನರು ಒಟ್ಟಿಗೆ ಬಂದು ಅಲ್ಲಿಯೇ ಕುಳಿತು, ತಮಗೆ ಬೇಕಾದ ಪದಾರ್ಥಗಳನ್ನು ಕೊಂಡು ತಿನ್ನುತ್ತ ವಿನೋದವಾದ ಮಾತುಗಳನ್ನಾಡುತ್ತ ಕಾಲಕಳೆಯುತ್ತಿದ್ದರು.

ಧರ್ಮಶಾಲೆಯ ತಲೆಬಾಗಿಲನ್ನು ದಾಟಿದ ಕೂಡಲೆ ಒಳಗಡೆ ಪ್ರಶಸ್ತವಾದ ಒಂದು ಅಂಗಳ. ಅದರ ಎರಡು ಕಡೆಗಳಲ್ಲಿಯೂ ಚಿಕ್ಕ ಚಿಕ್ಕ ಕೊಠಡಿಗಳು. ನಡುವಣ ವಿಶಾಲವಾದ ಮೈದಾನದಲ್ಲಿ ಕಿತ್ತಿಳೆ, ಮಾವು, ಹಲಸು ಮುಂತಾದ ಫಲವೃಕ್ಷಗಳು ಸಾಲಾಗಿದ್ದುವು. ಆ ದಿನ ಅನೇಕ ಮಂದಿ ಒಂಟೆಯ ಸವಾರರು ತಮ್ಮ ವಾಹನಗಳನ್ನು ಆ ವೃಕ್ಷಗಳಿಗೆ ಕಟ್ಟಿಹಾಕಿ ಅಲ್ಲಿ ವಿಶ್ರಮಿಸಿಕೊಂಡಿದ್ದರು. ಕೆಲವರು ಅವುಗಳಿಗೆ ಮೇವು ತಂದು ಹಾಕುತ್ತಿದ್ದರು; ಕೆಲವರು ತಮ್ಮ ಊಟ ಉಪಚಾರಗಳಿಗೆ ಆರಂಭಿಸುತ್ತಿದ್ದರು. ಊಟವು ಮುಗಿದನಂತರ ಕೆಲವರು ಗುಂಪಾಗಿ ಸೇರಿ ಹರಟೆ ಹೊಡೆಯುತ್ತ ತಾಂಬೂಲವನ್ನು ಸವಿಯುತ್ತ ಕುಳಿತಿದ್ದರು. ಸತ್ರದ ಅಧಿಕಾರಿಯು ಡೆಲ್ಲೀ ಆಗ್ರಾ ಕಡೆಗಳಿಂದ ಬಂದ ಜನರೊಡನೆ ಕುಳಿತು ಅಲ್ಲಿಯ ಸಮಾಚಾರಗಳನ್ನು ಕೇಳುತ್ತಿದ್ದನು. ಅವರು ಅಲ್ಲಿಯ ಅನೇಕ ವಿಷಯಗಳನ್ನು ಹೇಳುತ್ತ ತಮ್ಮ ದೊರೆಯ ಮಹಿಮಾತಿಶಯಗಳನ್ನು ವರ್ಣಿಸುತ್ತಿದ್ದರು. ಸತ್ರಾಧಿಕಾರಿಯು ಜಾತಿಯಲ್ಲಿ ಮುಸಲ್ಮಾನನಾಗಿದ್ದುದರಿಂದ ತಮ್ಮ ದೊರೆಯ ಮಹಿಮಾತಿಶಯಗಳನ್ನು ಏಕಾಗ್ರ ಚಿತ್ತದಿಂದ ಕೇಳುತ್ತ, "ಆಹಾ! ದೊರೆಯು ಇಂತಹ

ಸದ್ಗುಣಶಾಲಿಯೆ? ಆಶ್ಚರ್ಯ! ಆತನ ಹೆಸರೇನು?'' ಎಂದು ಕೇಳಲು ಅಲ್ಲಿ ಕುಳಿತಿದ್ದವರಲ್ಲೊಬ್ಬನು, 'ಬಾಬರಷಾ' ಎಂದನು. ಅದಕ್ಕೆ ಸತ್ರಾಧಿಕಾರಿಯು, ''ಅಚ್ಛಾ ಅಚ್ಛಾ! ಬಾಬರ ಎಂದರೆ ಸಿಂಹ; ಹೆಸರಿಗೆ ತಕ್ಕಂತೆ ಶೂರನೂ ದಯಾಳುವೂ ಆದ ಇಂತಹ ದೊರೆಯು ಈಗಿನ ಕಾಲದಲ್ಲಿ ಅಪೂರ್ವ'' ಎಂದು ಸ್ತೋತ್ರಮಾಡಿ, ''ಆತನ ವಯಸ್ಸೆಷ್ಟು?'' ಎಂದು ಕೇಳಿದನು. ''ನಾಲ್ವತ್ತು ನಾಲ್ವತ್ತೊಂದಿರಬಹುದು; ಆದರೂ ಆತನು ಗರಡಿಯ ಮನೆಯ ವಸ್ತಾದಿಯಂತೆ ಒಳ್ಳೆಯ ಬಲಿಷ್ಠನಾಗಿರುವನು'' ಎಂದು ಮತ್ತೊಬ್ಬನು ಹೇಳಿದನು.

ಈ ಮೇರೆಗೆ ಸಂಭಾಷಣೆ ನಡೆಯುತ್ತಿರುವಾಗ ಒಬ್ಬ ರಾಜಪೂತ ತರುಣನು ಅಲ್ಲಿಗೆ ಬಂದನು. ಅವನು ಆತುರಪಟ್ಟು ಬಂದುದರಿಂದ ಅವನ ಮೈಯೆಲ್ಲ ಬೆವತುಹೋಗಿದ್ದಿತು; ಉಚ್ಛ್ವಾಸ ನಿಶ್ವಾಸಗಳು ಬಹಳ ಬೇಗ ಬೇಗನೆ ನಡೆಯುತ್ತಿದ್ದುವು. ಆ ತರುಣನು, ''ಬೇದಿಲ್‌ಖಾನ ಎಲ್ಲಿ? ಬೇದಿಲ್‌ಖಾನ!'' ಎಂದು ಕೇಳಿದನು. ಕೂಡಲೆ ಸತ್ರಾಧಿಕಾರಿಯು ಎದ್ದು ನಿಂತು ಆಶ್ಚರ್ಯದಿಂದ ಆ ತರುಣನನ್ನು ನೋಡಿ, ''ಏನು? ಕೆಲಸವೇನು?'' ಎಂದನು. ತರುಣನು, ''ಸಲ್ಲಾಂ ಸಾಹೇಬರೇ! ತಾವೇನೋ ಸತ್ರಾಧಿಕಾರಿಗಳು? ಬೇದಿಲ್‌ಖಾನ ಸಾಹೇಬರು?''

ಅಧಿಕಾರಿ.—ಸಲ್ಲಾಂ! ಅಹುದು, ಅಹುದು.

ತರುಣ.—ಹಾಗಾದರೆ ಸ್ವಲ್ಪ ಇತ್ತ ಕಡೆಗೆ ಬನ್ನಿರಿ, ಬೇದಿಲ್!

ಬೇದಿಲ್‌ಖಾನನು ಅಲ್ಲಿ ಕುಳಿತಿದ್ದವರ ಕಡೆಗೆ ತಿರುಗಿ ನೋಡುತ್ತ ಆ ತರುಣನ ಹಿಂದೆ ಹೋದನು. ಅಲ್ಲಿದ್ದವರು ಈ ಘಟನೆಯನ್ನು ಕುರಿತು ತಮ್ಮ ತಮ್ಮಲ್ಲಿ ತರ್ಕ ವಿತರ್ಕಗಳಿಗಾರಂಭಿಸಿದರು. ತರುಣನೂ ಬೇದಿಲ್‌ಖಾನನೂ ಬಹು ದೂರ ಹೊರಟುಹೋದರು. ದಾರಿ ನಡೆಯುತ್ತ ತರುಣನು, ''ಸತ್ರದಲ್ಲಿ ಕೊಠಡಿಗಳು ತೆರವಾಗಿವೆಯೋ?'' ಎಂದು ಕೇಳಿದನು. ಖಾನನು ''ಒಂದೆರಡು ಕೊಠಡಿಗಳಲ್ಲಿ ಮಾತ್ರ ಸ್ಥಳ ದೊರೆಯಬಹುದು; ಬೇಕಾಗಿದ್ದರೆ ಬನ್ನಿ, ತೋರಿಸುತ್ತೇನೆ'' ಎಂದನು.

ತರುಣ.—ಸ್ವಲ್ಪ ನಿಲ್ಲಬೇಕು ; ನಾನು ನಿಮ್ಮೊಡನೆ ಸ್ವಲ್ಪ ಮಾತ ನಾಡತಕ್ಕದ್ದಿದೆ (ಎಂದು ಬೇದಿಲ್‌ಖಾನನ ಕೈಗಳನ್ನು ಹಿಡಿದುಕೊಂಡು) ಇಲ್ಲಿ ಯಾರೂ ಇಲ್ಲವಷ್ಟೆ? ನಾವಾಡುವ ಮಾತುಗಳು ಯಾರ ಕಿವಿಗೂ ಬೀಳಲಾಗದು.

ಬೇದಿಲ್‌ಖಾನನು ಭೀತಿಗೊಂಡು ಮರಳಿ ಮರಳಿ ಹಿಂದಿರುಗಿ ನೋಡುತ್ತ ತನ್ನ ನಡೆಯನ್ನು ತಡಮಾಡಿದನು.

ತರುಣ.—ಕ್ವ್ಯಾಜೀ ಸಾಹೇಬ್! ನೀವು ಗಾಬರಿಯಾದಿರೇನು? ಹಾಗೇನೂ ಇಲ್ಲ, ಸಂಶಯಪಡಬೇಡಿರಿ. ಸ್ವಲ್ಪ ದಯವಿಟ್ಟು ನನ್ನೊಡನೆ ಬಂದರೆ ನಿಮಗೆ ಹೆಚ್ಚಾದ ಲಾಭವುಂಟು (ಎಂದು ಹೇಳಿ ಅವನ ಕೈಯಲ್ಲಿ ಏನನ್ನೋ ಕೊಟ್ಟನು).

ಬೇದಿಲ್‌ಖಾನನು ಅದನ್ನು ನೋಡುವಲ್ಲಿ, ಅದೊಂದು ಚಿನ್ನದ ಮೊಹರಾವಾಗಿದ್ದಿತು. ಅವನ ಮನಸ್ಸು ಅವನ ಹೆಸರಿಗೆ ತಕ್ಕಂತೆ ಬದಲಾಯಿಸಿತು. ('ಬೇದಿಲ್' ಎಂದರೆ ಮನಸ್ಸಿನ ಬದಲಾವಣೆ.) ಅವನು ಆಶ್ಚರ್ಯಪಟ್ಟು ಬಾರಿ ಬಾರಿಗೂ ಆ ತರುಣನನ್ನೇ ನೋಡುತ್ತ ಏನೂ ಮರುಮಾತಾಡದೆ ಅವನ ಹಿಂದೆಯೇ ಹೊರಟನು. ತರುಣನು ಖಾನನ ಕೈಯಲ್ಲಿ ಮತ್ತೊಂದು ಮೊಹರಾವನ್ನು ಕೊಟ್ಟು, "ಅಗೋ, ಅಲ್ಲಿ ಕಾಣುವ ಮರಗಳ ಗುಂಪಿಗೆ ಹೋಗೋಣ, ಅಲ್ಲಿ ಎಲ್ಲ ವಿಷಯಗಳನ್ನೂ ತಿಳಿಸುತ್ತೇನೆ" ಎಂದು ಹೇಳುತ್ತ ಪ್ರತ್ಯುತ್ತರವನ್ನು ನಿರೀಕ್ಷಿಸದೆಯೇ ಹೊರಟುಬಿಟ್ಟನು. ಖಾನನು ಒಳ್ಳೆಯ ಪೀಕಲಾಟಕ್ಕೆ ಸಿಕ್ಕಿಬಿದ್ದು ಹಿಂದೆ ಹೋಗಲಿಕ್ಕೂ ಮನಸ್ಸು ಬಾರದೆ, ಮುಂದೆ ಹೋದರೆ ಏನೋ? ಎಂತೋ? ಯಾರಿಗೆ ಗೊತ್ತು? ಎಂದು ದಿಗಿಲುಬೀಳುತ್ತ, ಹೋಗ ದಿದ್ದರೆ ತನಗೆ ಬರಬಹುದಾದ ಲಾಭಕ್ಕೆ ಎಲ್ಲಿ ಚಕ್ರ ಬೀಳುವುದೊ ಎಂದು ಅಸಮಾಧಾನಪಡುತ್ತ, "ಅಕ್ಕಿಯ ಮೇಲೆ ಆಸೆ, ನಂಟರ ಮೇಲೆ ಪ್ರಾಣ" ಎಂಬಂತೆ ಡೋಲಾಯಮಾನವಾದ ಮನಸ್ಸುಳ್ಳವನಾಗಿದ್ದನು. ಒಂದು ಸಾರಿ ಕೈಯಲ್ಲಿ ಮಿರುಗುಟ್ಟುತ್ತಿರುವ ಮೊಹರಾಗಳನ್ನೂ ಮತ್ತೊಂದು ಸಾರಿ ಆ ತರುಣನನ್ನೂ ನೋಡುತ್ತ ಹಾಗೂ ಹೀಗೂ

ಅವನ ಜೊತೆಯಲ್ಲಿಯೇ ಹೊರಟನು. ಸ್ವಲ್ಪ ಹೊತ್ತಿನಲ್ಲಿಯೇ ನಿರ್ದಿಷ್ಟ ವಾದ ಸ್ಥಳಕ್ಕೆ ಇಬ್ಬರೂ ಬಂದು ಸೇರಿದರು. ತರುಣನು ತನ್ನ ತೀಕ್ಷ್ಣ ದೃಷ್ಟಿಯಿಂದ ಸುತ್ತಲೂ ನೋಡಿ ಅಲ್ಲಿ ಯಾರೂ ಇಲ್ಲವೆಂದು ಗೊತ್ತು ಮಾಡಿದನು. ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನೆ ನಿಂತರು. ಆಗ ಶುಕ್ಲ ಪಕ್ಷವಾದುದರಿಂದ ಪ್ರಶಾಂತವಾದ ಚಂದ್ರನ ಬೆಳಕು ಹಾಲು ಚೆಲ್ಲಿದ ಹಾಗೆ ಎಲ್ಲ ಕಡೆಗೂ ಹರಡಿದ್ದಿತು. ಆದರೂ, ಇವರಿಬ್ಬರೂ ನಿಂತಿದ್ದೆಡೆ ಯಲ್ಲಿ ಮರಗಳು ದಟ್ಟವಾಗಿ ಬೆಳೆದು ಬೆಳ್ದಿಂಗಳ ಪ್ರವೇಶಕ್ಕೆ ತಡೆಯಾಗಿ, ಕತ್ತಲೆಯು ಸುತ್ತಲೂ ಹಬ್ಬಿದ್ದುದರಿಂದ, ಆ ಸ್ಥಳದಲ್ಲಿ ನಿಂತಿದ್ದ ಇವರಿ ಬ್ಬರೂ ಇನ್ನಾರಿಗೂ ಕಾಣುವಂತಿರಲಿಲ್ಲ. ತರುಣನು ಬೇದಿಲ್‌ಖಾನನ ಬೆನ್ನಿನ ಮೇಲೆ ಕೈಹಾಕಿ, "ಏನು ಖಾನ ಸಾಹೇಬರೇ!" ಎಂದನು.

ಬೇದಿಲ್.—(ನಮ್ರತೆಯಿಂದ) ಮತ್ತೇನು ಸ್ವಾಮಿಗಾ?

ತರುಣ.—ಇನ್ನು ಸ್ವಲ್ಪ ಹೊತ್ತಿನೊಳಗಾಗಿ ಈ ದಕ್ಷಿಣದ ಕಡೆಯ ಮಾರ್ಗದಿಂದ ಒಬ್ಬ ಮುದುಕನು ಇಲ್ಲಿಗೆ ಬರುವನು; ತಿಳಿಯಿತೋ?

ಬೇದಿಲ್.—(ಕೈಯಲ್ಲಿರುವ ಮೊಹರಾಗಳನ್ನು ಅಲುಗಾಡಿಸುತ್ತ) ಒಬ್ಬ ಮುದುಕ! ಆ! ಮುದುಕನು ಬರುವನೇ? ಮುಂದೆ?

ತರುಣ.—ಅವನಿಗೆ ಇಲ್ಲಿ ತಂಗಲು ಸ್ಥಳ ದೊರೆಯುವುದೋ!

ಹೀಗೆಂದು ಕೇಳಿದ ಕೂಡಲೆ ಸತ್ರಾಧಿಕಾರಿಯ ಮನಸ್ಸು ವಿಭ್ರಮ ಗೊಂಡಿತು. ಪ್ರಶ್ನೆಗೆ ಉತ್ತರ ಕೊಡದೆ ಹಿಂದು ಮುಂದು ನೋಡುತ್ತ ಅವನು ಸುಮ್ಮನೆ ನಿಂತು, 'ಈ ತರುಣನು ಆಗಂತುಕ ವೃದ್ಧನಿಗೆ ಸ್ಥಳ ವನ್ನು ಕೊಡಬೇಕೆಂದು ಹೇಳುವನೊ, ಕೊಡಕೂಡದೆಂದು ನಿಷೇಧಿಸು ವನೊ, ಇವನ ಅಭಿಪ್ರಾಯವೇನಿರಬಹುದು?' ಎಂದು ಚಿಂತಿಸು ತ್ತಿದ್ದನು. ತರುಣನು, "ಏನು? ಸ್ಥಳವನ್ನು ಕೊಡುವಿರೋ ಹೇಗೆ?" ಎಂದು ಪುನಃ ಕೇಳಿದನು.

ಬೇದಿಲ್.—(ಸಂಶಯಪಡುತ್ತ) ಊಂ....ಆಗಲಿ; ಇಲ್ಲ, ಇಲ್ಲ, ಸ್ಥಳವು .. ಸಿ.. ಕ್ಕಿ ..ದ..ರೂ..ಸಿಕ್ಕಬಹು..ದು.. ಇಲ್ಲಿ..ಇಲ್ಲಿ.. ..ಕೊಡುವ ಹಾಗಿಲ್ಲ.

ತರುಣ.—ಸಾಹೇಬರೇ, ನಿಮ್ಮ ಬುದ್ಧಿಯನ್ನು ಸ್ವಲ್ಪ ಸ್ತಿಮಿತಕ್ಕೆ ತಂದುಕೊಳ್ಳಿರಿ; ಒಂದು ವೇಳೆ ನಿಮ್ಮ ಸತ್ರದಲ್ಲಿ ಸ್ಥಳವಿಲ್ಲದಿದ್ದರೂ ಆ ಮುದುಕನಿಗಾಗಿ ನೀವು ಸ್ವಲ್ಪ ಶ್ರಮ ವಹಿಸಿ ಸ್ಥಳಾನುಕೂಲಪಡಿಸಿ ಕೊಡಲೇಬೇಕು.

ಬೇದಿಲ್.—ಅತ್ಯಾವಶ್ಯಕವಾಗಿ ಬೇಕೇ ಬೇಕೇನು? (ತರುಣನಿಂದ ಇನ್ನೂ ಹೆಚ್ಚಾದ ದ್ರವ್ಯವನ್ನು ಸೆಳೆಯಬೇಕೆಂಬ ದುರಾಶೆಯಿಂದ) ನೋಡೋಣ ಸಾಧ್ಯವಾದರೆ! (ಎಂದು ಔದಾಸೀನ್ಯವನ್ನು ತೋರ್ಪಡಿಸಿದನು).

ತರುಣ.—(ಮೆಲ್ಲಗೆ) ಸ್ಥಳವನ್ನು ಕೊಡಲೇಬೇಕು; ಆದರೆ ಆ ಸ್ಥಳವು ಒಂದು ಮೂಲೆಯಲ್ಲಿದ್ದು ಜನ ಸಂಚಾರಕ್ಕೆ ಹೆಚ್ಚು ಆಸ್ಪದ ವಿಲ್ಲದಂತಿರಬೇಕು.

ಬೇದಿಲ್.—(ತತ್‌ಕ್ಷಣವೇ) ಅದೇಕೆ?

ಹೀಗೆಂದು ಕೇಳುವಷ್ಟರಲ್ಲಿಯೇ ಸೂಕ್ಷ್ಮಗ್ರಾಹಿಯಾದ ಆ ರಾಜಪೂತ ಸರದಾರನು ಅವನ ಪ್ರಶ್ನೆಗೆ ಅವಕಾಶವನ್ನು ಕೊಡದಂತೆ ಮತ್ತೂ ಒಂದೆರಡು ಸುವರ್ಣ ಮುದ್ರಿಕೆಗಳನ್ನು ಅವನ ಕೈಯಲ್ಲಿಟ್ಟನು. ಇದನ್ನು ನೋಡಿದ ಕೂಡಲೆ ಖಾನನು ತಾನು ಕೇಳಬೇಕೆಂದಿದ್ದ ಪ್ರಶ್ನೆಯನ್ನು ಮರತೇಬಿಟ್ಟನು.

ತರುಣ.—ಮತ್ತೊಂದು ಮಾತು: ಆ ಮುದುಕನಿಗಾಗಿ ನೀವು ಕೊಡುವ ಕೊಠಡಿಗೆ ಬಾಗಿಲು ಇದ್ದರೆ ಒಳಗಿನಿಂದ ಅಗುಳಿಯಾಗಲೀ, ಹೊರಗಡೆಯಿಂದ ಚಿಲುಕವಾಗಲೀ ಏನೂ ಇರಕೂಡದು; ಇದು ಗುಪ್ತವಾಗಿರಬೇಕು; ತಿಳಿಯಿತೋ?

ಬೇದಿಲ್.—ಆ! ಏನು ಹೇಳಿದಿರಿ? ಇದರ ಕಾರಣವೇನು? ನನಗೆ ಬಹಳ ಸಂಶಯವಾಗುತ್ತದೆ (ಎಂದು ಭಯ ಚಕಿತನಾದನು).

ತರುಣ.—ಸಂಶಯವೇನೂ ಇಲ್ಲ; ನಿಮಗೆ ಸಲ್ಲಿಸಬೇಕಾದ ಬಹುಮಾನವು ಇನ್ನೂ ಉಂಟು, ಖಂಡಿತವಾಗಿ ಸಲ್ಲಿಸುವೆನು (ಎಂದು ತನ್ನ ಅಂಗಿಯೊಳಗೆ ಕೈಹಾಕಿ ಅಳ್ಳಾಡಿಸಿದನು).

ಆ ನಾಣ್ಯಗಳ ಶಬ್ದವನ್ನು ಕೇಳಿದ ಮಾತ್ರದಿಂದಲೇ ಬೇದಿಲ್ ಖಾನನ ಮನಸ್ಸು ನೆಮ್ಮದಿಯಾಯಿತು. ತಾನು ಅಷ್ಟು ಸುವರ್ಣ ಮುದ್ರೆಗಳಿಗೂ ಒಡೆಯನಾಗುವೆನೆಂಬ ಭಾವೀ ಕಲ್ಪನೆಯು ಹೊಳೆಯುತ್ತಲೇ ಅವನಿಗುಂಟಾದ ಆನಂದವನ್ನು ಹೇಳಲು ಸಾಧ್ಯವಿಲ್ಲ. ಹಣವೆಂದರೆ ಹೆಣವೂ ಬಾಯ್ದೆರೆಯುವುದು. ಖಾನನು ಆ ಕತ್ತಲೆಯಲ್ಲಿಯೇ ಆ ತರುಣನ ಮುಖವನ್ನು ಅತ್ಯಾನಂದದಿಂದ ದಿಟ್ಟಿಸಿ ನೋಡುತ್ತಿದ್ದನು.

ತರುಣ.—ಸಾಹೇಬಜೀ! ನೀವು ನನ್ನ ಮಾತಿನಂತೆ ನಡೆದುಕೊಂಡರೆ ಈ ದ್ರವ್ಯವೆಲ್ಲವೂ ನಿಮ್ಮ ಸ್ವಾಧೀನವಾಗುವುದು. ಆ ವೃದ್ಧನಿಗೆ ನೀವು ಯಾವ ಕೊಠಡಿಯನ್ನು ಕೊಡುವಿರೋ ಅದರ ಮಗ್ಗುಲಲ್ಲಿರುವ ಕೋಣೆಯನ್ನೇ ನನಗೆ ಕೊಡಬೇಕು.

ಬೇದಿಲ್.—ನೋಡಿರಿ ಸ್ವಾಮಿ! ನಾನು ಬಡವ; ನೀವು ಹೇಳುವುದರಲ್ಲಿ ಏನಾದರೂ ಮೋಸಗೀಸವಿದ್ದರೆ ನನಗೇನೂ ಬೇಡ; ಸ್ಥಳವೂ ಇಲ್ಲ.

ತರುಣ.—ಏನು! ಏನು! ಮೋಸವೇ? ಖಂಡಿತವಾಗಿಯೂ ಇಲ್ಲ; ನಿನ್ನನ್ನು ನಾನು ವಂಚಿಸಿದರೆ ಫಲವೇನು?

ಬೇದಿಲ್.—ಫಲವೋ ಗಿಲವೋ ನನಗೆ ಗೊತ್ತಿಲ್ಲ, ನಿಮ್ಮ ಮಾತಿನಲ್ಲಿ ನಂಬಿಕೆಯಿಡುತ್ತೇನೆ. ಇದರಿಂದ ನನ್ನ ಮಾನ ಪ್ರಾಣಗಳಿಗೇನೂ ತೊಂದರೆಬಾರದಿದ್ದರೆ ಸರಿ. ಈಗಿನ ನಮ್ಮ ದೊರೆಯು ಬಹಳ ಖಂಡಿತವಾದಿ, ನಿಷ್ಪಕ್ಷಪಾತಿ ; ಅವನಿಗೆ ನಾನು ದ್ರೋಹ ಮಾಡಿದೆನೆಂದು ತಿಳಿದರೆ ಸಾಕು, ನನ್ನ ಹೆಸರೇ ಇಲ್ಲದಂತಾಗುವುದು.

ತರುಣ.—ಯಾರು ನಿಮ್ಮ ಈಗಿನ ದೊರೆ?

ಬೇದಿಲ್.—ನೀವೇನು ಹೊಸಬರಂತೆ ಕಾಣುತ್ತದೆ. ಈಗಿನ ನಮ್ಮ ದೊರೆಯು ಬಾಬರಷಾ ಎಂಬುದನ್ನು ಕೇಳಿಲ್ಲವೇ? ಆತನು ಆಗಾಗ್ಗೆ ತನ್ನ ವೇಷವನ್ನು ಮಾರ್ಪಡಿಸಿಕೊಂಡು ಗುಪ್ತ ಚಾರನಂತೆ ತಿರುಗುತ್ತ ಅಲ್ಲಲ್ಲಿ ನಡೆಯುವ ಒಳ ಸಂಚುಗಳನ್ನೆಲ್ಲ ತಿಳಿದುಕೊಂಡು ತಪ್ಪಿತಸ್ಥರಿಗೆ ಚೆನ್ನಾಗಿ ಶಿಕ್ಷೆ ವಿಧಿಸುವನೆಂದು ಎಲ್ಲರೂ ಹೇಳುತ್ತಾರೆ.

ತರುಣ.—ಆದರೇನಾಯಿತು? ನಾವೇನೂ ರಾಜದ್ರೋಹ ಮಾಡುವುದಿಲ್ಲವಷ್ಟೆ!

ಬೇದಿಲ್.—ಅದೇನೂ..ಇಲ್ಲ; ಆದರೆ ನಿಮ್ಮ ಪಾಡು ನಿಮಗೆ. ನಾನೂ ನೀವೂ ಯಾವ ತೊಂದರೆಗೂ ಒಳಗಾಗದಂತೆ ಎಚ್ಚರಿಕೆಯಾಗಿದ್ದರೆ ಸರಿ. ಅದಿರಲಿ; ನಿಮ್ಮ ಹೆಸರೇನು?

ತರುಣ.—ಸರಿ ಸರಿ! ನಾನು ನಿಮ್ಮನ್ನು ವಂಚಿಸುವವನಲ್ಲ. ನನ್ನ ಹೆಸರೇ? ಸೈತಾನ ಸಿಂಗ.

ಬೇದಿಲ್.—ಯಾ ಅಲ್ಲಾ! ತೋಬಾ ತೋಬಾ! ಬಹು ಭಯಂಕರವಾದ ಹೆಸರು; ನಾನು ಇಂತಹ ಹೆಸರನ್ನು ಎಲ್ಲಿಯೂ ಕೇಳಿಲ್ಲ.

ತರುಣ.—ಅದೆಲ್ಲಾ ಇರಲಿ; ಈಗ ಸತ್ರಕ್ಕೆ ಹೋಗೋಣ ನಡೆಯಿರಿ. ಮೊದಲು ಸ್ಥಳವನ್ನು ನನಗೆ ತೋರಿಸಿರಿ; ಆ ವೃದ್ಧನು ಬರುವ ವೇಳೆಯಾಗಿರಬಹುದು; ಇನ್ನು ಆಲಸ್ಯ ಮಾಡಬೇಡಿರಿ.

ಹೀಗೆಂದು ಹೇಳುತ್ತ ಸತ್ರದ ಕಡೆಗೆ ಹೊರಟ ತರುಣನೊಡನೆ ಬೇದಿಲ್‌ಖಾನನೂ ಮರುಮಾತನಾಡದೆ ಹೊರಟು, ಇಬ್ಬರೂ ಸತ್ರವನ್ನು ಸೇರಿದರು. ಬೇದಿಲ್‌ಖಾನನು ಸತ್ರದ ಒಂದು ಮೂಲೆಯಲ್ಲಿರುವ ಎರಡು ಕೋಣೆಗಳನ್ನು ತೋರಿಸಲು, ತರುಣನು ಆ ಕೋಣೆಗಳು ತನ್ನ ಕಾರ್ಯ ಸಾಧನೆಗೆ ಅನುಕೂಲವಾದುವುಗಳೆಂದು ತಿಳಿದು ಆನಂದಪಟ್ಟು, ಇನ್ನೆರಡು ಸುವರ್ಣ ಮುದ್ರೆಗಳನ್ನು ತೆಗೆದು ಬೇದಿಲ್‌ಖಾನನ ಕೈಯಲ್ಲಿಟ್ಟು, "ಖಾನ ಸಾಹೇಬ! ನಿಮಗೆ ಬಹುಮಾನ ಮಾಡತಕ್ಕದ್ದು ಇನ್ನೂ ಬಹಳ ವುಂಟು. ನಾನು ಈ ಬಾವಿಯ ಬಳಿಗೆ ಹೋಗಿ ಫಲಾಹಾರವನ್ನು ತೀರಿಸುತ್ತೇನೆ. ಅಷ್ಟರಲ್ಲಿ ಆ ಮುದುಕನು ಬಂದರೆ ಈ ಕೋಣೆಯನ್ನೇ ತೋರಿಸಿರಿ. ಅವನನ್ನು ನೀವು ಸುಲಭವಾಗಿ ಗುರ್ತಿಸಬಹುದು: ತಲೆಯ ಮೇಲೆ ಒಂದು ಬಿಳಿಯ ಟೋಪಿಯನ್ನು ಹಾಕಿಕೊಂಡಿದ್ದಾನೆ; ಸ್ವಲ್ಪ ಬಗ್ಗಿಕೊಂಡು ಕುಂಟುತ್ತ ನಡೆಯುತ್ತಾನೆ. ತಿಳಿಯಿತೋ? ಅವನು ಬಂದು ಇಲ್ಲಿ ವಿಶ್ರಮಿಸಿಕೊಂಡನಂತರ ನೀವು ಆ ಸಮಾಚಾರವನ್ನು ನನಗೆ ತಿಳಿಸಬೇಕು. ಜೋಕೆ! ಮತ್ತೆ ಯಾರಿಗೂ ಈ ವಿಷಯದಲ್ಲಿ ಅತ್ಯಲ್ಪ ಸಮಾಚಾರವಾದರೂ ತಿಳಿಯಕೂಡದು. ನೀವು ಮಾತ್ರ ಯಾವ ವಿಧದಲ್ಲಿಯೂ ಸಂಶಯವನ್ನೂ ಭಯವನ್ನೂ ಇಟ್ಟುಕೊಳ್ಳಬೇಡಿರಿ.

ನನ್ನ ಕಾರ್ಯವು ಪೂರೈಸಿದನಂತರ ಇದೆಲ್ಲವನ್ನೂ ನಿಮಗೆ ಬಹುಮಾನ ವಾಗಿ ಕೊಡುವೆನು'' ಎಂದನು. ಬೇದಿಲ್‌ಖಾನನು ಆಗಲೆಂದೊಪ್ಪಿ ಹೊರಟುಹೋದನು. ಸೈತಾನ ಸಿಂಗನು ಫಲಾಹಾರ ಸಾಮಗ್ರಿಗಳನ್ನು ಅಂಗಡಿಯಲ್ಲಿ ಕೊಂಡು ತಂದು ಬಾವಿಯ ಹತ್ತಿರ ಕುಳಿತು ಫಲಾಹಾರ ಮಾಡುತ್ತಿದ್ದನು. ದಿಟ್ಟಿಸಿ ನೋಡಿದರೆ ಅವನು ನಿಜವಾಗಿಯೂ ಫಲಾ ಹಾರ ಮಾಡುತ್ತಿದ್ದವನಂತೆ ತೋರಲಿಲ್ಲ; ಅವನ ದೃಷ್ಟಿಯೆಲ್ಲವೂ ಸತ್ರದ ಕಡೆಗೇ ಇದ್ದಿತು; ಯಾರು ಯಾರು ಬರುವರು? ಯಾರು ಯಾರು ಏನೇನು ಮಾಡುತ್ತಿರುವರು? ವೃದ್ಧನು ಬಂದನೇ ಇಲ್ಲವೆ? ಎಂದು ಮುಂತಾಗಿ ಸತ್ರದಲ್ಲಿರುವ ಪ್ರತಿಯೊಂದು ವಸ್ತುವನ್ನೂ ತನ್ನ ಸೂಕ್ಷ್ಮ ದೃಷ್ಟಿಯಿಂದ ವಿಮರ್ಶೆ ಮಾಡುತ್ತಿದ್ದನೆಂದು ಕಂಡುಬಂದಿತು. ಮಧ್ಯೇ ಮಧ್ಯೇ ಏನನ್ನೋ ಅಲ್ಪ ಸ್ವಲ್ಪ ಬಾಯಿಗೆ ಹಾಕಿಕೊಂಡು ಅಗಿಯು ತ್ತಿದ್ದನು; ಅಷ್ಟೇ.

ಹಾಗೂ ಹೀಗೂ ಸ್ವಲ್ಪ ಹೊತ್ತು ಕಳೆಯಿತು, ಫಲಾಹಾರ ಸಾಮಗ್ರಿಯೂ ತೀರಿತು, ಸೈತಾನ ಸಿಂಗನ ನೋಟವೂ ಮುಗಿಯಿತು. ಅವನು ತನ್ನಲ್ಲಿದ್ದ ಒಂದು ಚಿಕ್ಕ ಪಾತ್ರೆಯನ್ನೂ ನೂಲು ಹುರಿಯನ್ನೂ ಹೊರಗೆ ತೆಗೆದು ಆ ಬಾವಿಯಿಂದ ನೀರನ್ನು ಸೇದಿ ಕೈಕಾಲು ತೊಳೆದು ಕೊಂಡು ಸ್ವಲ್ಪ ನೀರನ್ನು ಕುಡಿದನು. ಈ ಸಮಯದಲ್ಲಿ ಖಾನ ಸಾಹೇ ಬನು ಬಂದು ಸಲ್ಲಾಂ ಮಾಡಿ, '' ಆ ಮುದುಕನು ಬಂದಿದ್ದಾನೆ..ಆದರೆ..

ಸೈತಾನ.—(ಉತ್ಸುಕತೆಯಿಂದ) ..ಆದರೆ..ಏನು? ಮತ್ತೇನು? ಬೇಗ ಹೇಳು.

ಖಾನ.—ಅವನ ಸಂಗಡ ಇನ್ನಿಬ್ಬರು ಬಂದಿದ್ದಾರೆ.

ಸೈತಾನ.—ಹಾಗಾದರೆ ಬೇರೆ ಇನ್ನಾರಾದರೂ ಆಗಿರಬಹುದು. ಆ?

ಖಾನ.—ಛೇ ಛೇ! ಅಲ್ಲ, ಅಲ್ಲ; ನೀವು ಹೇಳಿದ ಮನುಷ್ಯನೇ: ಬಿಳಿಯ ಟೋಪಿಯನ್ನು ಹಾಕಿಕೊಂಡಿರುವ ಕುಂಟ ಮುದುಕ.

ಸೈತಾನ.—ಅವನ ಸಂಗಡ ಬಂದಿರುವ ಇನ್ನಿಬ್ಬರು ಯಾರು?

ಖಾನ.—ರೋಗದಿಂದ ನರಳುತ್ತಿರುವ ಒಬ್ಬ ಮುದುಕಿ, ನಾಲ್ಕೈದು ವರ್ಷ ವಯಸ್ಸಿನ ಒಬ್ಬ ಹುಡುಗಿ.

ಸೈತಾನ.—ಹಿಂದೂಗಳೋ? ನಿಮ್ಮ ಜಾತಿಯವರೋ?

ಖಾನ.—ಹೆಂಗುಸರು ಬಹುಶಃ ಹಿಂದೂಮತದವರೇ ಆಗಿರಬೇಕು; ಮುದುಕನು ಮಾತ್ರ ನಮ್ಮ ಮತದವನು.

ಸೈತಾನ.—ಯಾರಾದರೂ ಆಗಲಿ; ಅವರನ್ನು ನಾನು ಹೇಳಿದ ಕೊಠಡಿಯಲ್ಲಿಯೇ ಇಳಿಯುವಂತೆ ಮಾಡು.

ಬೇದಿಲ್‌ಖಾನನು ಇಷ್ಟು ಮಾತನಾಡಿ ಹೊರಟುಹೋದನು. ಸೈತಾನ ಸಿಂಗನು ಪುನಃ ಬಾವಿಯಲ್ಲಿ ತಂಬಿಗೆಯನ್ನು ಇಳಿಯಬಿಟ್ಟು ಹೀಗೆ ಆಲೋಚಿಸಿದನು:—

"ಮುದುಕನ ಜೊತೆಯಲ್ಲಿ ಬಂದಿರುವವರು ಯಾರಿರಬಹುದು? ಮೊದಲೇ ಸಂಗಡ ಬಂದಿದ್ದರೊ ಏನೊ? ನಾನು ನೋಡಿದಾಗ ಯಾರೂ ಇರಲಿಲ್ಲವಲ್ಲಾ? ಒಂದು ವೇಳೆ ಇತ್ತೀಚೆಗೆ ಬಂದು ಸೇರಿದವರೆಂದು ಭಾವಿಸಿದರೆ, ಈ ಹಿಂದೂ ಜನರು ಅವನ ಜೊತೆಯಲ್ಲೇಕೆ ಸೇರಿದರು? ಇಳಿಯದು, ನಾನು ಅವರನ್ನು ನೋಡಿದ ಮೇಲೆ ಯಾವುದನ್ನೂ ನಿರ್ಧಾರ ಮಾಡಬೇಕು; ನಾನೇನೂ ಮೋಸಹೋಗಿಲ್ಲವಷ್ಟೆ!" ಎಂದುಕೊಂಡು ನೀರಿನ ಪಾತ್ರೆಯನ್ನು ಕೈಯಲ್ಲಿ ತೆಗೆದುಕೊಂಡು ಸತ್ರಾಭಿಮುಖನಾಗಿ ಹೊರಟು, ತನಗಾಗಿ ಗೊತ್ತುಮಾಡಿಕೊಂಡಿದ್ದ ಕೊಠಡಿಯಲ್ಲಿ ಕುಳಿತು ಕೊಂಡನು; ಸ್ವಲ್ಪ ಹೊತ್ತಿನ ಮೇಲೆ ಹೊರಗೆ ಬಂದು ಮುದುಕನಿದ್ದ ಕೋಣೆಯ ಕಡೆಗೆ ನೋಡಲು, ಬಾಗಿಲು ಸ್ವಲ್ಪ ಓರೆಯಾಗಿದ್ದಿತು, ಮಿಣುಗುಟ್ಟುವ ದೀಪದಿಂದ ಮಂದವಾದ ಬೆಳಕು ಬೀಳುತ್ತಿದ್ದಿತು. ಬಿಳಿಯ ಟೋಪಿಯ ಮುದುಕನು ಅಲ್ಲಿ ಕುಳಿತಿದ್ದನು. ಅವನನ್ನು ನೋಡಿದ ಕೂಡಲೆ, "ಏನು! ಅವನೇ ಇವನು! ಅದೇ ಮುದುಕ! ಆದರೆ ಇಬ್ಬರು ಹೆಂಗುಸರಿರುವರು; ನನ್ನ ಕೆಲಸ ಸಫಲವಾಗುವುದೊ ಇಲ್ಲವೊ?" ಎಂದೆಂದುಕೊಂಡನು. ಸುಮಾರು ಅರ್ಧ ತಾಸು ಕಳೆಯಿತು; ಸೈತಾನ ಸಿಂಗನು ಪುನಃ ತನ್ನ ಕೋಣೆಗೆ ಹೋಗಿ ಕುಳಿತನು. ಬೇದಿಲ್‌ಖಾನನು ಮುದುಕನಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಡುತ್ತಿದ್ದನು. ಅವರ ಕೆಲಸವೆಲ್ಲ ಮುಗಿದ ಮೇಲೆ ಖಾನ ಸಾಹೇಬನು ಸೈತಾನಸಿಂಗನಿದ್ದ

ಕೋಣೆಯಲ್ಲಿ ಇಣಿಕಿ ನೋಡಿ ಮತ್ತೆಲ್ಲಿಗೋ ಹೊರಟುಹೋದನು. ತರುಣ ರಾಜಪೂತನು ಪುನಃ ಹೊರಗೆ ಬಂದು, ತನ್ನ ಮನೋನಿಶ್ಚಯಕ್ಕಾಗಿ ಆ ಮುದುಕನನ್ನು ಮರಳಿ ನೋಡಿದನು. ಆಗಲೂ ಆ ಕೋಣೆಯ ಬಾಗಿಲು ತೆರೆದಿದ್ದಿತು. ಸೈತಾನ ಸಿಂಗನು ತನ್ನ ಮನಸ್ಸಿನಲ್ಲಿ, "ಅದೇ ಮುದುಕನೇನೊ ನಿಜ ; ಈ ಹಿಂದೂ ಹೆಂಗುಸರಿಬ್ಬರು ಸಂಗಡ ಇರುವುದರಿಂದ ಸ್ವಲ್ಪ ಸಂಶಯವಾಗುತ್ತದೆ. ನಾನೇ ಮೋಸಹೋಗಿರುವೆನೆ? ಇಲ್ಲ, ಇಲ್ಲ ; ನನ್ನ ಕಣ್ಣುಗಳಲ್ಲಿ ದೃಷ್ಟಿಪಾಟವವಿದೆ" ಎಂದುಕೊಂಡು ಹಿಂದಿರುಗಿ ತನ್ನ ಕೊಠಡಿಯೊಳಗೆ ಹೋಗಿ ಬಾಗಿಲನ್ನು ಮುಂದಕ್ಕೆ ಚಾಚಿ, ಹಾಸಿಗೆಯನ್ನು ಸರಿಮಾಡಿಕೊಂಡು ಕುಳಿತು, ಅಕ್ಕಪಕ್ಕದ ಕೊಠಡಿಗಳಲ್ಲಿ ಜನರು ಏನೇನು ಮಾತನಾಡುವರು? ಎಂಬುದನ್ನು ಆಲಿಸಿ ಕೇಳುತ್ತಿದ್ದನು.

## ಮೂರನೆಯ ಪರಿಚ್ಛೇದ

ಸೈತಾಸ ಸಿಂಗನು ತನ್ನ ಕೋಣೆಯಲ್ಲಿ ಏಕಾಗ್ರ ಚಿತ್ತದಿಂದ ಕುಳಿತುಕೊಂಡಿರುವಲ್ಲಿ, ಪಕ್ಕದ ಕೋಣೆಯಿಂದ ಖಕ್ ಖಕ್ ಎಂದು ಕೆಮ್ಮಿನ ಶಬ್ದವು ಕೇಳಿಸಿತು. ರೋಗಿಷ್ಠಳಾದ ಮುದುಕಿಯೇ ಕೆಮ್ಮುತ್ತಿರುವವಳೆಂದು ಸೈತಾಸನು ತಿಳಿದುಕೊಂಡನು. ಆದರೆ ಆ ಮುದುಕಿ ಯಾರು? ಆ ಹುಡುಗಿ ಯಾರು? ಎಂಬ ಪ್ರಶ್ನೆಗಳು ಸಿಂಗನ ತಲೆಯಲ್ಲಿ ಮೇಲಿಂದ ಮೇಲೆ ಬರಲಾರಂಭಿಸಿದುವು. ಪ್ರಶ್ನೆಗಳಿಗೆ ತಕ್ಕ ಉತ್ತರಗಳು ಮಾತ್ರ ದೊರೆಯಲಿಲ್ಲ. ಆದರೂ ಅವನು ತನ್ನ ಮನಸ್ಸಿನಲ್ಲಿ, "ಇವರಲ್ಲಿ ಯಾರಾದರೂ ಮಾತನಾಡಲು ಪ್ರಾರಂಭಿಸಿದರೆ ಅದರ ಮೂಲಕ ನಿಜಾಂಶವನ್ನು ಕಂಡುಹಿಡಿಯಬಹುದಲ್ಲವೆ? ಆದರೆ ಮಾತನಾಡುವವರು ಯಾರು? ಮುದುಕಿಯು ರೋಗಗ್ರಸ್ತಳು; ಹುಡುಗಿ ಚಿಕ್ಕದು; ಜಾಗ್ರುತೆಯಾಗಿ ನಿದ್ದೆಹೋಗುವಳು. ಮುದುಕನೊಬ್ಬನೇ ಯಾರ ಸಂಗಡ ಮಾತನಾಡಬೇಕು?" ಎಂದು ಮುಂತಾಗಿ ಯೋಚಿಸುತ್ತಿದ್ದನು. ಆ ಸಮಯದಲ್ಲಿ, "ಇದನ್ನಾದರೂ ಸ್ವಲ್ಪ ಸೇವಿಸಮ್ಮಾ! ಅಲ್ಪಾಹಾರವಾದರೂ ಹೊಟ್ಟೆಗೆ ಬಿದ್ದರೆ ಸ್ವಲ್ಪ ಶಮನವಾಗಬಹುದು" ಎಂಬ ಮಾತುಗಳು ಕೇಳಿಸಿದುವು. ಸೈತಾಸನು, ಇವು ಮುದುಕನ ಮಾತುಗಳೆಂದು ತರ್ಕಿಸಿ, ಹಾಗೆಯೇ ಕೇಳುತ್ತಿರುವಲ್ಲಿ, "ಮಗುವೇ, ನಾನು ಏನೂ ತಿನ್ನಲಾರೆ; ಏನು ಮಾಡಲಿ? ನಾಲಗೆ ಕೆಟ್ಟುಹೋಗಿದೆ" ಎಂದು ಕುಗ್ಗಿಹೋದ ಸ್ವರದಿಂದ ಮುದುಕಿಯು ಹೇಳಿದಳು.

ಮುದುಕ.—ಹಾಗೆಯೇ ಸ್ವಲ್ಪ ಸುಧಾರಿಸಿಕೊಂಡು ತಿನ್ನಮ್ಮಾ! ಸೇರುವುದಿಲ್ಲವೆಂದು ಆಹಾರವನ್ನೇ ಬಿಟ್ಟರೆ ಹೇಗೆ?

ರೋಗಿ.—ಹುಡುಗಿಯು ಏನಾದರೂ ತಿಂದಳೇನು?

ಹುಡುಗಿ.—ಅಮ್ಮಾ! ಇದೋ ನೋಡು, ನಾನು ರೊಟ್ಟಿಯನ್ನು ತಿನ್ನುತ್ತಿದ್ದೇನೆ.

ರೋಗಿ.—ತಿನ್ನಪ್ಪಾ, ನನ್ನ ಮುದ್ದು ಮಗುವೇ! ಅಷ್ಟನ್ನೂ ತಿಂದು ಚೆನ್ನಾಗಿ ನಿದ್ದೆ ಹೋಗು.

ಹುಡುಗಿ.—ಅಮ್ಮಾ, ನೀನು ಮಾತ್ರ ಏನೂ ತಿನ್ನುವುದಿಲ್ಲವಲ್ಲಾ! ನನಗೇ ಹೇಳುತ್ತೀಯೆ?

ರೋಗಿಯು ವೃದ್ಧನನ್ನು ಕುರಿತು, "ಅಪ್ಪಾ, ನನಗೇಕೊ ಹೊಟ್ಟೆಯು ತಳಮಳಿಸುತ್ತಿದೆ; ನಿನ್ನ ಕೈಯನ್ನು ಸ್ವಲ್ಪ ಕೊಡು; ಹೊರಗೆ ಹೋಗಿ ವಾಂತಿಯಾಗುವುದೇನೋ ನೋಡುವೆನು" ಎಂದಳು. ವೃದ್ಧನು ತನ್ನ ಕೈಯಿಂದ ಅವಳ ಕೈಯನ್ನು ಹಿಡಿದುಕೊಂಡು ಹೊರಗೆ ಹೊರಡುವ ಪ್ರಯತ್ನದಲ್ಲಿದ್ದನು; ಅಷ್ಟರಲ್ಲಿ ರೋಗಿಗೆ ಓಕರಿಕೆ ಬಂದು ಅಲ್ಲಿಯೇ ವಾಂತಿಯಾಯಿತು. ವೃದ್ಧನು, "ಅಮ್ಮಾ, ಇಲ್ಲಿಯೇ ಪೂರ್ತಿಯಾಗಿ ವಾಂತಿಮಾಡು; ಹೊರಗೆ ಹೋಗುವುದಕ್ಕೆ ನಿನಗೆ ತ್ರಾಣ ವಿಲ್ಲ, ನಾನು ಅದನ್ನೆಲ್ಲ ಎತ್ತಿಹಾಕುವೆನು, ನೀನು ಸಂಕೋಚಪಟ್ಟು ಕೊಳ್ಳಬೇಡ" ಎಂದನು. ಮುದುಕಿಯು ಕರುಣಾರ್ದ್ರ ಸ್ವರದಿಂದ, "ಅಪ್ಪಾ! ನೀನು ಯಾರು? ನಾನು ಯಾರು? ನಮ್ಮಿಬ್ಬರಿಗೂ ಅಜ ಗಜ ನ್ಯಾಯ. ನಾನು ನಿನಗೆ ಇಷ್ಟು ವಿಧವಾದ ತೊಂದರೆಗಳನ್ನು ಕೊಡ ಬೇಕಾಯಿತು, ಉಪಾಯವಿಲ್ಲ; ನಾವಿಬ್ಬರೂ ಒಬ್ಬ ತಾಯಿಯ ಹೊಟ್ಟೆ ಯಲ್ಲಿ ಹುಟ್ಟಿದ್ದೆವೋ ಏನೊ? ನೀನು ಮನುಷ್ಯ ಮಾತ್ರನಲ್ಲ, ದೇವತಾಂಶ ಸಂಭೂತನು; ನನ್ನ ಭಾಗದ ಪ್ರತ್ಯಕ್ಷ ದೇವರು. ಅಪ್ಪಾ, ನಿನ್ನ ಹೆಸ ರೇನು?" ಎಂದಳು. ವೃದ್ಧನು, "ಅಮ್ಮಾ, ಈ ಅತ್ಯಲ್ಪನನ್ನು ನೀನು ಇಷ್ಟು ಉಪಚಾರ ಮಾಡಬೇಕಾದುದೇನೂ ಇಲ್ಲ. ನನ್ನ ಹೆಸರು ಏನಾದರೇನು? ನಾನೊಬ್ಬ ನಿನ್ನ ಮಗನೆಂದೇ ತಿಳಿದುಕೊ. ನಾನೊಬ್ಬ ಸಾಧಾರಣ ಮನುಷ್ಯ, ಸ್ತೋತ್ರಕ್ಕೆ ಪಾತ್ರನಲ್ಲ" ಎಂದು ಸುಮ್ಮ ನಾದನು. ಮುದುಕಿಗೆ ಪುನಃ ವಾಂತಿಯಾಯಿತು. ವೃದ್ಧನು ಏನೂ ಸಂಕೋಚಪಡದೆ ಅದನ್ನೆಲ್ಲ ಹೊರಗೆ ತೆಗೆದು ಹಾಕಿ ಸ್ಥಳ ಶುದ್ಧಿ ಮಾಡಿ ದನು. ಪಕ್ಕದ ಕೋಣೆಯಲ್ಲಿ ಇದುವರೆಗೂ ಕುಳಿತು ಆಲಿಸಿ ಕೇಳುತ್ತಿದ್ದ ಸೈತಾನ ಸಿಂಗನು ಆಶ್ಚರ್ಯ ಚಕಿತನಾದನು. ಇದುವರೆಗೂ ಆ ರೋಗಿಯೂ ವೃದ್ಧನೂ ಏನೇನು ಮಾತು ಕತೆಗಳನ್ನಾಡುವರೊ ಅದನ್ನು ಕೇಳಲಿಚ್ಛೆಯುಳ್ಳವನಾಗಿ ಅದರಲ್ಲಿಯೇ ಮನಸ್ಸಿಟ್ಟವನಾಗಿದ್ದುದರಿಂದ ಆ ಎರಡು ಕೋಣೆಗಳಿಗೂ ಮಧ್ಯದಲ್ಲಿರುವ ಗೋಡೆಯಲ್ಲಿ ಒಂದು

ಚಿಕ್ಕ ಕಿಟಕಿಯಿರುವುದು ಅವನ ಕಣ್ಣಿಗೆ ಬಿದ್ದಿರಲಿಲ್ಲ. ಈಗ ಅದು ಕಾಣಬರಲು, ಅವನು ತನ್ನ ಮನಸ್ಸಿನಲ್ಲಿ, "ಆಹಾ! ನಾನು ಎಂತಹ ಮೂಢನು? ಇದುವರೆಗೂ ಈ ಕಿಟಕಿಯನ್ನು ನೋಡದೆ ವ್ಯರ್ಥವಾಗಿ ಕಾಲಹರಣ ಮಾಡಿದೆನಲ್ಲಾ!" ಎಂದುಕೊಂಡು ಸದ್ದು ಮಾಡದೆ ಅದರ ಬಳಿಗೆ ಹೋಗಿ ನಿಂತು, ಇನ್ನೂ ಏನೇನು ನಡೆಯುತ್ತದೆಯೋ ನೋಡ ಬೇಕೆಂದು ನಿರೀಕ್ಷಿಸುತ್ತಿದ್ದನು.

ಆ ಕೋಣೆಯು ಅಷ್ಟು ಚೊಕ್ಕಟವಾಗಿರಲಿಲ್ಲ: ಅಲ್ಲಲ್ಲಿ ಕಸವು ಬಿದ್ದಿದ್ದಿತು. ಸಾಮಾನ್ಯವಾದೊಂದು ಹಾಸಿಗೆಯ ಮೇಲೆ ರೋಗಿಯಾದ ಮುದುಕಿಯು ತನ್ನ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಕುಳಿತಿದ್ದಳು. ಆಕೆಯ ಎದುರಿನಲ್ಲಿ ಬಿಳಿಯ ಟೋಪಿಯ ಮುದುಕನು ಕುಳಿತಿದ್ದನು. ಮಾಸಿದ ಸೀರೆಯನ್ನುಟ್ಟಿದ್ದರೂ ಕೇವಲ ರೂಪವತಿಯಾದ ಬಾಲಿಕೆಯು ಭೀತಿಯಿಂದಲೂ ದುಃಖದಿಂದಲೂ ಆ ಮುದುಕಿಯನ್ನು ಎವೆಯಿಕ್ಕದೆ ನೋಡುತ್ತಿದ್ದಳು. ಹುಡುಗಿಯ ಎದುರಿನಲ್ಲಿ ಒಂದು ತಟ್ಟೆಯೊಳಗೆ ಆಹಾರ ಸಾಮಗ್ರಿಗಳು ಇಟ್ಟಿದ್ದುವು. ಮುದುಕಿಯು ಆಗಿಂದಾಗ್ಗೆ ಕೆಮ್ಮುತ್ತ ಓಕರಿಸುತ್ತ ಇದ್ದಳು; ಆಗಾಗ ವಾಂತಿಯೂ ಆಗುತ್ತಲೇ ಇದ್ದಿತು. ಬಾಲೆಯು ಇದನ್ನೆಲ್ಲ ನೋಡಿ, "ಅಮ್ಮಾ! ನಿನಗೇಕೆ ಹೀಗೆ ವಾಂತಿಯಾಗುತ್ತಿದೆ? ಹೇಳು" ಎಂದಳು. ಮುದುಕಿಯು, "ಮಗೂ! ಏನೂ ಇಲ್ಲ; ದಾರಿ ನಡೆದ ಆಯಾಸದಿಂದ ಹೀಗಾಗಿರಬಹುದು; ನೀನು ಊಟಮಾಡಿದೆಯಾ?" ಎಂದು ಕೇಳಿದಳು. ಹುಡುಗಿಯು, ಎದುರಿನಲ್ಲಿರುವ ರೊಟ್ಟಿಗಳನ್ನು ನೋಡುತ್ತ, ಮಾಡಿದೆ ಎಂದಳು.

ವೃದ್ಧ.—ಏನಮ್ಮಾ! ರೊಟ್ಟಿಗಳೆಲ್ಲ ಹಾಗೆಯೇ ಇವೆಯಲ್ಲಾ! ಅವುಗಳನ್ನೂ ತಿಂದುಬಿಡು.

ಹುಡುಗಿ.—ಇಲ್ಲ, ನನಗೇಕೋ ಈ ಹೊತ್ತು ಅಷ್ಟು ಹಸಿವಿಲ್ಲ.

ಮುದುಕಿ.—ಹಾಗಾದರೆ ಬಿಟ್ಟುಬಿಡು; ಕೈ ತೊಳೆದುಕೊ.

ಹುಡುಗಿಯು ಹಾಗೆಯೇ ಮಾಡಿದಳು. ಕ್ರಮೇಣ ಮುದುಕಿಗೆ ವಾಂತಿಯಾಗುವುದು ನಿಂತಿತು; ಆದರೂ ಅಶಕ್ತತೆಯಿಂದ ಮುಖವು

ವಿವರ್ಣವಾಗುತ್ತ ಬಂದಿತು; ತಳಮಳವು ಹೆಚ್ಚಾಯಿತು; ಇದನ್ನು ನೋಡಿ ಹುಡುಗಿಯು ಗಾಬರಿಯಾದಳು. ವೃದ್ಧನು ಬಾಲಿಕೆಯ ಅವಸ್ಥೆಯನ್ನು ನೋಡಿ, "ಅಮ್ಮಾ, ಮಗೂ! ಬಹಳ ಹೊತ್ತಾಯಿತು, ಸ್ವಲ್ಪ ಮಲಗಿಕೊ, ನಿನಗೆ ನಿದ್ದೆ ಬಂದಿರುವಂತೆ ಕಾಣುತ್ತದೆ" ಎಂದನು. ನಿಜವಾಗಿಯೂ ಹುಡುಗಿಗೆ ನಿದ್ದೆ ಬಂದಿದ್ದಿತು; ಮುದುಕಿಯ ಸಂಕಟ ವನ್ನು ನೋಡುತ್ತಿದ್ದುದರಿಂದ ಸ್ವಲ್ಪ ಮರೆಯಾಗಿದ್ದಿತು. ವೃದ್ಧನು ಹೀಗೆ ಹೇಳಿದುದನ್ನು ಕೇಳುತ್ತಲೆ ಹುಡುಗಿಯು, ಆಗಲಿ ಎಂದು ಮಲಗಿ ಕೊಂಡಳು; ನಿದ್ದೆಯೂ ಆವರಿಸಿತು. ವೃದ್ಧನು ರೋಗಿಯನ್ನು ಕುರಿತು, "ಅಮ್ಮಾ! ನೀನೂ ಸ್ವಲ್ಪ ಮಲಗಿಕೊ, ಕುಳಿತುಕೊಂಡಿದ್ದರೆ ಆಯಾಸವು ಹೆಚ್ಚುವುದು; ಚೆನ್ನಾಗಿ ಬಾಯಿ ಮುಕ್ಕುಳಿಸಿ ತೊಳೆದುಕೊಂಡು ಮಲಗು" ಎಂದನು. ಮುದುಕಿಯು ಹಾಗೆಯೇ ಮಾಡಿದಳು.

ಸ್ವಲ್ಪ ಹೊತ್ತಾದ ಮೇಲೆ ವೃದ್ಧನು ಮುದುಕಿಯ ಕೈ ಹಿಡಿದು ನಾಡಿಯನ್ನು ಪರೀಕ್ಷಿಸಿದನು, ಏನೂ ಗೊತ್ತಾಗಲಿಲ್ಲ; ಅವಳು ಕದಲದೆ ಬಿದ್ದಿದ್ದಳು; ಕಾಲನ್ನು ಮುಟ್ಟಿ ನೋಡಿದನು, ಶೀತಲವಾಗಿದ್ದಿತು; ಮೂಗಿನ ಹತ್ತಿರ ಸ್ವಲ್ಪ ಹತ್ತಿಯ ಚೂರನ್ನಿಟ್ಟನು, ಅದು ಬಹಳ ಹೊತ್ತಿನ ಮೇಲೆ ಸ್ವಲ್ಪ ಅಲುಗಾಡಿತು. ವೃದ್ಧನು ಗಾಬರಿಯಿಂದ ಕೂಡಲೆ, "ಕ್ಯಾಹೋಗಾ! (ಏನಾಗಿ ಹೋಯಿತು!)" ಎಂದು ಒಂದು ನಿಟ್ಟುಸಿರು ಬಿಟ್ಟು, ತನ್ನ ಚೀಲದಲ್ಲಿದ್ದ ಒಂದೆರಡು ಮಾತ್ರೆಗಳನ್ನು ತೆಗೆದು ರೋಗಿಯ ಬಾಯ ಲ್ಲಿಟ್ಟನು. ಸ್ವಲ್ಪ ಹೊತ್ತಿನ ಮೇಲೆ ಮುದುಕಿಗೆ ಚೈತನ್ಯವುಂಟಾಯಿತು. ವೃದ್ಧನು, "ಯಾ ಅಲ್ಲಾ! ಪರವರದಿಗಾರ! ಈ ರೋಗಿಯ ಮೇಲೆ ಕನಿಕರಪಡು! ಅನಾಥ ರಕ್ಷಕನೆಂಬ ಬಿರುದನ್ನು ಸಾರ್ಥಕ ಮಾಡಿಕೊ!" ಎಂದು ಹೊರಗೆ ಬಂದು ಸ್ವಲ್ಪ ಹುಡಿ ಮಣ್ಣನ್ನು ತಂದು ಕೋಣೆಯ ನೆಲದ ಮೇಲೆ ಅಲ್ಲಲ್ಲಿ ಹರಡಿದ್ದ ವಾಂತಿಯ ಮೇಲೆ ಹಾಕಿ ಅದನ್ನೆಲ್ಲ ಬಳಿದು, ತನ್ನ ಹತ್ತಿರವಿದ್ದ ಪಾತ್ರೆಗೆ ತುಂಬಿ ಹೊರಗೆ ಚೆಲ್ಲಿ ಪಾತ್ರೆಯನ್ನು ತೊಳೆದು ತನ್ನ ಕೈಕಾಲುಗಳನ್ನೂ ತೊಳೆದುಕೊಂಡನು.

ಅಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಕಾರ್ಯವನ್ನೂ ನಿರೀಕ್ಷಿಸು ತ್ತಿದ್ದ ಸೈತಾನ ಸಿಂಗನು ಪರಮಾಶ್ಚರ್ಯ ಭರಿತನಾದನು. "ಇದೇನು!

ಈ ವೃದ್ಧನಿಗೆ ಇಷ್ಟು ಔದಾರ್ಯ ಗುಣವೆ? ಅನ್ಯಮತದವರಿಗಾಗಿ ಇಷ್ಟು ಶ್ರದ್ಧೆಯಿಂದ ಉಚ್ಚ ನೀಚ ಭಾವವನ್ನು ತೊರೆದು ಉಪಚರಿಸುವುದೆ? ನಾನು ಮೋಸಹೋಗಿಲ್ಲವಷ್ಟೆ! ಇಲ್ಲ, ಇಲ್ಲ; ನಾನು ಯಾರನ್ನು ಹುಡುಕುತ್ತಿದ್ದೆನೋ ಅವನೇ ಇವನು; ಇದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಆದರೆ ಇದೇನೋ ವಿಪರೀತವಾಗಿದೆ. (ಆಲೋಚಿಸಿ) "ಓಹೋ! ಈಗ ಗೊತ್ತಾಯಿತು: ಈ ಮುದುಕನು ಬಹಳ ಧೂರ್ತನು, ಸರಿಯಂತೆ ಕುತಂತ್ರವುಳ್ಳವನು; ನನ್ನನ್ನು ಮೋಸಗೊಳಿಸಲು ಈ ವಿಧವಾದ ಆಟವನ್ನು ಹೂಡಿರಬೇಕು; ಇದೇ ನಿಶ್ಚಯ" ಎಂದು ನಿರ್ಧರಿಸಿ ತನ್ನ ಕೋಣೆಯಿಂದ ಹೊರಗೆ ಬಂದು ಸುತ್ತಲೂ ಸೂಕ್ಷ್ಮದೃಷ್ಟಿಯಿಂದ ನೋಡಿದನು. ಎಲ್ಲ ಕಡೆಯೂ ನಿಶ್ಶಬ್ದವಾಗಿದ್ದಿತು; ಚಂದ್ರನು ಮುಳುಗುವ ಸಮಯ; ಸತ್ರದಲ್ಲೆಲ್ಲ ಕತ್ತಲೆಯೇ ಹೆಚ್ಚಾಗಿ ಕವಿದಿದ್ದಿತು; ಸೈತಾನ ಸಿಂಗನಿಗೆ ಸಮಾಧಾನವಾಯಿತು. ಇನ್ನು ಆಲಸ್ಯಮಾಡಬಾರದೆಂದು ಅವನು ತನ್ನ ಸೊಂಟದಲ್ಲಿದ್ದ ಕರಿಯ ಬಟ್ಟೆಯೊಂದನ್ನು ತೆಗೆದು ಅದರಿಂದ ತನ್ನ ಮುಖವನ್ನೂ ಮೈಯನ್ನೂ ಮುಚ್ಚಿಕೊಂಡು, ಅದುವರೆಗೂ ಬಚ್ಚಿಟ್ಟುಕೊಂಡಿದ್ದ ಒಂದು ಕಠಾರಿಯನ್ನು ಹೊರಗೆ ತೆಗೆದು ಕೈಯಲ್ಲಿ ಭದ್ರವಾಗಿ ಹಿಡಿದುಕೊಂಡು ವೃದ್ಧನಿರುವ ಕೋಣೆಯ ಕಡೆಗೆ ಹೊರಟನು. ಕೊಠಡಿಯ ಬಾಗಿಲು ಸ್ವಲ್ಪ ತೆರೆದಿದ್ದಿತು; ಹೊರಗಡೆ ನಿಂತವರಿಗೆ ಒಳಗೆ ನಡೆಯುವ ಎಲ್ಲ ವಿಷಯಗಳೂ ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ಸೈತಾನ ಸಿಂಗನು ಹೊರಗೆ ನಿಂತು ಒಳಗೆ ಇಣಿಕಿ ನೋಡಿದನು. ಅಲ್ಲಿ ವೃದ್ಧನು ಒಂದು ವಸ್ತ್ರವನ್ನು ನೆಲದಮೇಲೆ ಹಾಸಿ ಮೊಳಕಾಲೂರಿ ಕುಳಿತು, ಭಗವತ್ಪ್ರಾರ್ಥನೆ ಮಾಡುತ್ತ ಬಾಯಿಯಲ್ಲಿ ಏನೇನೋ ಹೇಳುತ್ತಿದ್ದನು. "ಅಲ್ಲಾಹ! ಇಲ್ಲಿಲ್ಲಾ! ಪರವರದಿಗಾರ! ದಯಾಕರೋ! ದಯಾಕರೋ! ಯಾಹ! ಅಲ್ಲಾ! ಶಹಾನ ಶಹಾ! ಈ ಅನಾಥಳಾದ ಹುಡುಗಿಯನ್ನು ಕಾಪಾಡು. ಈ ಮುದುಕಿಗೆ ಜೀವ ದಾನವನ್ನು ನೀಡು! ಹೇ ದಯಾಘನ! ನಿನ್ನ ಕೃಪಾ ಕಟಾಕ್ಷವನ್ನು ಇವರ ಕಡೆಗೆ ತಿರುಗಿಸಿ ನೋಡು. ದಾರುಣಮಯವಾದೀ ಸಂಸಾರ ಸಮುದ್ರದಲ್ಲಿ ಈ ಚಿಕ್ಕ ಹುಡುಗಿಯು ಈಗೀಗ ಹಜ್ಜೆ ಇಡುತ್ತಿರುವಳು; ಪುಣ್ಯಾಪಾಪಗಳ ಭೀತಿಯನ್ನರಿಯಳು; ಸ್ತ್ರೀ

ಜನ್ಮಕ್ಕೆ ಯಾವಾಗಲೂ ಇತರರ ಆಶ್ರಯವು ಇದ್ದೇ ಇರಬೇಕು; ಈ ಚಿಕ್ಕ ವಯಸ್ಸಿನಲ್ಲಂತೂ ಅತ್ಯಾವಶ್ಯಕವಾಗಿ ಬೇಕೇ ಬೇಕು; ಪ್ರಾಪ್ತ ವಯಸ್ಕಳಾದ ಮೇಲೆ ಸ್ವಬುದ್ಧಿಯುಂಟಾಗುವುದರಿಂದ, ಒಂದು ವೇಳೆ ಆಶ್ರಯವು ದೊರೆಯದಿದ್ದರೂ, ಹೇಗಾದರೂ ಮಾಡಿ ಜೀವನ ನಿರ್ವಾಹ ಮಾಡಿಕೊಳ್ಳಬಹುದು; ಆದುದರಿಂದ, ಹೇ ಪರಮಾತ್ಮ! ಈ ಚಿಕ್ಕ ಕುಸುಮಕ್ಕೆ ಆಶ್ರಯಭೂತವಾಗಿರುವ ಈ ಮುದುಕಿಯೆಂಬ ವೃಕ್ಷ ವನ್ನು ಒಣಗಿಸಬೇಡ. ನಿನ್ನ ಕರುಣಾ ಸಮುದ್ರದಲ್ಲಿಯ ಅತ್ಯಲ್ಪ ಭಾಗ ವನ್ನಾದರೂ ಈ ವೃದ್ಧೆಗೆ ದಯಪಾಲಿಸು. ಹೇ ದಯಾ ಸಮುದ್ರ! ನಿನ್ನ ಹೆಸರು ಸಾರ್ಥಕವಾಗಬೇಕಾದರೆ ಈ ವೃದ್ಧಳನ್ನೂ ಈ ಬಾಲಿಕೆ ಯನ್ನೂ ಕಾಪಾಡು; ಇಲ್ಲದಿದ್ದರೆ ಅಸಾಮಾನ್ಯವಾದ ಈ ಹೂ ಮೊಗ್ಗೆಯು ಅರಳುವುದಕ್ಕೆ ಮೊದಲೇ ಅನ್ಯಾಯವಾಗಿ ಬಾಡಿಹೋಗುವುದು. ಈ ಅಪಕೀರ್ತಿಯು ನಿನಗೆ ಬಾರದಿರಲಿ; ನೀನೇ ಸೃಷ್ಟಿಸಿದ ಈ ಕೋಮಲ ಕುಟ್ಮಲವು ತನ್ನ ಪರಿಮಳವನ್ನು ಎಲ್ಲ ಕಡೆಗೂ ಹರಡುವುದಕ್ಕೆ ಮೊದಲೇ ನಿನ್ನಿಂದಲೇ ಬಾಡಿಹೋಯಿತೆಂದರೆ ನಿನಗೆ ಅಪಕೀರ್ತಿಯೇ ಸಿದ್ಧ; ಇದು ನಿನಗೆ ಯಶಸ್ಕರವಲ್ಲ. ಕಾತ್ಕಾಲದಲ್ಲಿ ಈ ಕುಸುಮವು ಕೋಮಲವಾಗಿಯೂ ಪವಿತ್ರವಾಗಿಯೂ ಆಚ್ಛಾದಿತ ಸುಗಂಧಯುಕ್ತ ವಾಗಿಯೂ ಇರುವುದು. ಹೇ ಜಗದೀಶ! ಅನಾಥ ಬಂಧೋ! ಇವರಿಬ್ಬ ರನ್ನೂ ಕಾಪಾಡು ಕಾಪಾಡು'' ಎಂದು ಹೇಳುತ್ತ ಖುರಾನಿನ ಕೆಲವು ವಾಕ್ಯಗಳನ್ನು ಹೇಳುತ್ತ ಅಂಜಲಿಬದ್ಧನಾಗಿ ಕುಳಿತಿದ್ದನು.

ಇದೆಲ್ಲವನ್ನೂ ನೋಡಿದ ಸೈತಾನ ಸಿಂಗನಿಗೆ ಆಶ್ಚರ್ಯವು ಮಿತಿ ಮೀರಿ, ಅವನು ಚಿತ್ರ ಪ್ರತಿಮೆಯಂತೆ ಸ್ತಬ್ಧನಾಗಿ ನಿಂತು ಹೀಗೆ ಆಲೋ ಚಿಸಿದನು:—''ಇದೇನು ವಿಚಿತ್ರ! ಇವನು ಮುಸಲ್ಮಾನನು; ಹಿಂದೂ ಹೆಂಗುಸನ್ನು ಉಪಚರಿಸುತ್ತಿದ್ದಾನೆ. ಏನು ಗಂಭೀರತೆ! ಪ್ರೇಮದಿಂದ ಕೂಡಿದ ಮುಖ ಮಂಡಲ! ಕರುಣ ರಸವುಕ್ಕಿ ಗದ್ಗದ ಸ್ವರದಿಂದ ಹೊರಡುತ್ತಿರುವ ಭಗವಂತನ ಪ್ರಾರ್ಥನೆ! ಕಣ್ಣಿನಿಂದ ಫಳ ಫಳನೆ ಉದುರುತ್ತಿರುವ ಅಶ್ರು ಬಿಂದುಗಳು! ಆಹಾ! ಹೀಗೂ ಉಂಟೆ! ಪರೋಪಕಾರಕ್ಕಾಗಿಯೇ ತನ್ನ ಸ್ವಾರ್ಥವನ್ನು ಅತಿ ತುಚ್ಛವಾಗೆಣಿಸಿ,

ಪರರ ಶ್ರೇಯಸ್ಸನ್ನು ಹೀಗೆ ಬಯಸುವುದುಂಟೆ! ಏನು ಭಗವದ್ಭಕ್ತಿ! ಎಷ್ಟು ಏಕಾಗ್ರ ಚಿತ್ತತೆ! ಆಹಾ! ಮಹಮ್ಮದೀಯ ಮತದಲ್ಲಿಯೂ ಇಂತಹ ಸತ್ಪುರುಷರಿದ್ದಾರೆಯೇ? ಎಷ್ಟೋ ಜನರಿರಬಹುದು. ನನ್ನ ತಿಳಿವಳಿಕೆಯು ತಪ್ಪು. ಯಾವ ಕುಲವಾದರೇನು? ಸತ್ಪುರುಷರು ಎಲ್ಲ ಕುಲದಲ್ಲಿಯೂ ಇದ್ದಾರೆ. ಯಾವ ಕುಲ ಧರ್ಮದಲ್ಲಿಯೂ ಪರ ಪೀಡೆಯನ್ನು ಮಾಡಬಹುದೆಂದು ಹೇಳಿಲ್ಲ. ಸ್ವಾರ್ಥದ ಮಹತ್ವಾಕಾಂಕ್ಷೆಗೊಳಪಟ್ಟ ನೀಚರೇ ಅಲ್ಲವೆ ಪರ ಹಿಂಸಾ ಪರಾಯಣರು! ಅಂತಹ ನೀಚರು ಇತರ ಕುಲಗಳಲ್ಲಿಲ್ಲವೆ? ಎಲ್ಲೆಲ್ಲಿಯೂ ಇರಬಹುದು. ಹೀಗೆಂದ ಮೇಲೆ ಜಾತಿ, ಮತಗಳೇ ನೀಚತನಕ್ಕೆ ಕಾರಣಗಳಲ್ಲ; ಆಯಾ ಕುಲ ಧರ್ಮದ ರಹಸ್ಯವನ್ನರಿಯದ, ಪರಪೀಡನೆಯನ್ನು ಗಣನೆಗೆ ತಾರದ ಮನುಷ್ಯಾಧಮರು ಎಲ್ಲ ಪಂಗಡಗಳಲ್ಲಿಯೂ ಇರುವರು. ಇಂತಹ ನರ ರಾಕ್ಷಸರ ಜನ್ಮಕ್ಕೆ ಧಿಕ್ಕಾರ! ಓಹೋ! ನಾನು ಬಂದಿರುವ ಕೆಲಸವನ್ನು ಮರೆತೇಬಿಟ್ಟೆನು. ಆ ಕಾರ್ಯವು ಯುಕ್ತವೆ ಅಯುಕ್ತವೆ?'' ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ, ''ಏನು? ನನ್ನ ವಚನ?.... ದ್ರೋಹಿಸೂರು!....ವಂಚಕ! ಕಪಟ ಕೃತ್ಯ! ಹಾ! ಹಾ! ಬಿಡಬೇಕೆ? ಎಂದಿಗೂ ಬಿಡಲಾಗದು; ನನ್ನ ಕೆಲಸವನ್ನು ಪೂರ್ತಿ ಮಾಡಲೇ ಬೇಕು'' ಎಂದು ನಿರ್ಧರಿಸಿ ಬಾಗಿಲನ್ನು ಮೆಲ್ಲಗೆ ತಳ್ಳಿ ಒಳಹೊಕ್ಕು ಮುದುಕನ ಎದುರಿನಲ್ಲಿ ಬಂದು ನಿಂತನು. ಬಾಗಿಲು ತೆರೆಯುವಾಗ ಸ್ವಲ್ಪ ಶಬ್ದವಾದುದರಿಂದ ವೃದ್ಧನ ಚಿತ್ತೈಕಾಗ್ರತೆಗೆ ಭಂಗವುಂಟಾಗಲು, ಆತನು ಕಣ್ದೆರೆದು ನೋಡಿ, ''ಯಾರು? ಏನು ಬೇಕು?'' ಎಂದನು. ಆಗಂತುಕನು, ''ನಾನು, ನಿನ್ನ ಯಮ'' ಎಂದು ಹೇಳುತ್ತ ತನ್ನ ಕಠಾರಿಯನ್ನು ಮೇಲಕ್ಕೆತ್ತಿ, ''ನಿನ್ನ ಪ್ರಾಣವು ಬೇಕು'' ಎಂದನು. ಆಕಸ್ಮಿಕವಾಗುಂಟಾದ ಈ ವಿಚಿತ್ರ ಘಟನೆಯಿಂದ ವೃದ್ಧನು ಗಾಬರಿಪಟ್ಟು, ತನ್ನ ಕೈಯನ್ನೆತ್ತಿ ಅವನನ್ನು ತಡೆಯುತ್ತ, ''ನಿಲ್ಲು ನಿಲ್ಲು! ಮುಖವನ್ನು ಮುಚ್ಚಿಕೊಂಡು ಯಾವ ಅಭಿಪ್ರಾಯದಿಂದ ಬಂದಿರುವೆಯೆಂಬುದು ತಿಳಿಯಿತು; ಗುರುತು ಸಿಕ್ಕಬಾರದೆಂದು ಹೀಗೆ ಬಂದಿರುವೆಯಲ್ಲವೆ? ನಿನ್ನ ಹೇಳಿಕೆಯಂತೆ ನೀನು ಮೃತ್ಯುವೇ ಆಗಿರುವಲ್ಲಿ ಆಗ

ಬಹುದು. ಮೃತ್ಯುವು ಈ ರೂಪದಿಂದ ಬರುವುದೇ ಇಲ್ಲ. ನೀನೊಬ್ಬ ವೀರ ಪುರುಷನಾಗಿರಬೇಕು; ಆದರೆ ಅಂತಹ ವೀರನು ಹೀಗೆ ತಲೆ ಮರಿಸಿ ಕೊಂಡು ಬಂದು, ನಿರಾಯುಧನಾಗಿಯೂ ನಿರಪರಾಧಿಯಾಗಿಯೂ ಇರು ವವನನ್ನು ಎಂದಿಗೂ ಕೊಲ್ಲಲಾರನು. ಇದು ಅಂಥವನ ವೀರತ್ವಕ್ಕೆ ಕಳಂಕಾಸ್ಪದವು. ಪರಸ್ಪರ ಯುದ್ಧದಲ್ಲಿ ನೀನು ನನ್ನನ್ನು ಕೊಂದರೆ ನನಗೆ ಸಂತೋಷ; ಇಲ್ಲದೆ, ಮುದುಕಿ ನಿಶ್ಯಸ್ತ್ರನಾದ ನನ್ನನ್ನು ಕೊಲ್ಲು ವುದರಿಂದ ನೀನು ಅನ್ಯಾಯವಾಗಿ ಪ್ರಾಣಿ ಹತ್ಯಾ ದೋಷವನ್ನು ಕಟ್ಟಿ ಕೊಳ್ಳಬೇಕಾಗುವುದು'' ಎಂದನು. ಸ್ಪೃತಾನ ಸಿಂಗನು ವೃದ್ಧನಾಡಿದ ಗಂಭೀರ ಭಾಷಣವನ್ನು ಕೇಳಿ ಪ್ರತ್ಯುತ್ತರ ಕೊಡದೆ ಸ್ವಲ್ಪ ಸ್ತಬ್ಧ ನಾಗಿದ್ದು, ''ಒಳ್ಳೆಯದು, ನಾನು ನಿನ್ನೊಡನೆ ಯುದ್ಧಕ್ಕೆ ಸಿದ್ಧನಾ ಗಿರುವೆನು'' ಎಂದನು.

ವೃದ್ಧ.—ಓಹೋ! ಬಹಳ ಸಂತೋಷ! ಆದರೆ ಇತ್ತ ನೋಡು (ಮುದುಕಿಯನ್ನೂ ಬಾಲಿಕೆಯನ್ನೂ ತೋರಿಸಿ), ಈ ಇಬ್ಬರೂ ನನ್ನನ್ನು ನಂಬಿಕೊಂಡು ನಿದ್ದೆಮಾಡುತ್ತಿರುವರು. ಈ ಮುದುಕಿಯು ರೋಗ ಗ್ರಸ್ತಳು, ಆ ಹುಡುಗಿಯು ಕೇವಲ ಬಾಲೆ. ಅಲ್ಲದೆ, ಈ ಮುದುಕಿಯು ಆರೋಗ್ಯ ಲಾಭವನ್ನು ಹೊಂದುವ ವರೆಗೂ ನಾನು ಶುಶ್ರೂಷೆಯನ್ನು ಮಾಡುವೆನೆಂದು ಪ್ರತಿಜ್ಞೆ ಮಾಡಿರುವೆನು. ಈ ಸಮಯದಲ್ಲಿ ನಾನು ಇವರನ್ನು ಇಲ್ಲಿಯೇ ಬಿಟ್ಟು ನಿನ್ನೊಡನೆ ಯುದ್ಧಕ್ಕೆ ಬರಬಹುದೆ? ನೀನೇ ಆಲೋಚಿಸು. ಇದರಿಂದ, ನಾನು ಯುದ್ಧಕ್ಕಾಗಲಿ ಮರಣಕ್ಕಾಗಲಿ ಅಂಜಿ, ಈ ವಿಧವಾಗಿ ಹೇಳುತ್ತಿರುವೆನೆಂದು ಖಂಡಿತವಾಗಿಯೂ ತಿಳಿಯ ಬೇಡ; ಹಾಗಿದ್ದರೆ ನಾನು ಮೊದಲೇ ಹೆದರಿ, ನನ್ನನ್ನು ಕೊಲ್ಲಬೇಡ ವೆಂದು ಬೇಡಿಕೊಳ್ಳುತ್ತಿದ್ದೆನು.

ಸ್ಪೃತಾನ.—ಹಾಗಾದರೆ ನಾನು ಬಂದಿರುವುದೇಕೆಂಬುದು ನಿನಗೆ ಈ ಮೊದಲೇ ತಿಳಿದಿರಬೇಕು.

ವೃದ್ಧ.—ಅದು ಹೇಗೆ? ಆ ಪರಮೇಶ್ವರನೇ ಬಲ್ಲನು. ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಹೇಗೆ ತಿಳಿಯುವುದಕ್ಕಾದೀತು? ನೀನು

ಛದ್ಮ ವೇಷದಿಂದ ಬಂದು ನನ್ನನ್ನು ಸಂಹರಿಸುವುದಕ್ಕೆ ಕಾರಣವೇನು? ······ಹಾಗೇನಾದರೂ ಇದ್ದರೆ······

ಸೈತಾನ.—ಹಾಗಿದ್ದರೆ ಏನಾಗುತ್ತಿದ್ದಿತು?

ವೃದ್ಧ.—ಹಾಗಾದರೆ ನನ್ನ ಅಪರಾಧವೇನೆಂಬುದನ್ನು ಮೊದಲು ತಿಳಿಸು; ನಾನು ಅಂತಹ ಅಪರಾಧಿಯಾಗಿದ್ದು ಅದಕ್ಕೆ ದೇಹಾಂತ ಶಿಕ್ಷೆಯೇ ನ್ಯಾಯವಾದ ತೀರ್ಪಾಗಿದ್ದರೆ ನಾನು ಬಹಳ ಸಂತೋಷದಿಂದ ಸಮ್ಮತಿಸುತ್ತೇನೆ.

ಸೈತಾನ.—ನೀನು ಅಪರಾಧಿಯೋ ಅನಪರಾಧಿಯೋ ಅದು ಹಾಗಿರಲಿ. ಒಂದು ವೇಳೆ ಅಪರಾಧಿಯಾಗದಿದ್ದರೂ ನಾನು ನಿನ್ನನ್ನು ಅನ್ಯಾಯವಾಗಿ ವಧಿಸಲು ಬಂದಿರುವೆನೆಂದೇ ತಿಳಿದುಕೊ; ಇದರಿಂದೇನು ಬಾಧಕ?

ವೃದ್ಧ.—ಏನು ಬಾಧಕವೇ? ಅಯ್ಯೋ! ನೀನು ಇನ್ನೂ ಪ್ರಾಯದ ಭರದವನು. 'ವಿನಾಶೆ ಬರುವವನು ದೇಶವನ್ನೇ ಕಾಣನು' ಎಂಬ ನಾಣ್ನುಡಿಯಂತೆ ಲೋಕವ್ಯವಹಾರದಲ್ಲಿ ನೀನು ಅಷ್ಟು ಚತುರನಲ್ಲವೆಂದು ಕಾಣುವುದು. ಆ ಪರಮ ಕಾರುಣಿಕನಾದ ಭಗವಂತನಿಂದ ನಿರ್ಮಿತ ವಾದ ಈ ಜಗತ್ತು ಪಿಶಾಚಿಗಳಿಂದ ನಿರ್ಮಿಸಲ್ಪಟ್ಟಿದೆಂದು ಹೇಳಿದರೆ ಏನು ಬಾಧಕವೋ ಅದೇ ಬಾಧಕ; ತಿಳಿಯಿತೊ? ಯಾರಾದರೂ ಇದರ ನಿರ್ಣಯವನ್ನು ಮಾಡಿಕೊಟ್ಟರೆ ಆಗ ಯಾವುದು ಸಿದ್ಧಾಂತವಾಗುವುದೊ ಅದರಂತೆ ತಿಳಿಯುವೆನು. ಎಲೈ ತರುಣನೇ, ದೇವರಿಂದ ನಿರ್ಮಿತವಾದ ಈ ಜಗತ್ತಿನಲ್ಲಿ ಯುಕ್ತಾಯುಕ್ತ ವಿವೇಚನಾ ಶಕ್ತಿಯುಳ್ಳ ಯಾವ ಮನುಷ್ಯನೂ ಅನ್ಯಾಯವಾಗಿ ಪ್ರಾಣಿ ಹತ್ಯ ಮಾಡಿ ಘೋರ ಪಾತಕಕ್ಕೆ ಎಂದೆಂದಿಗೂ ಈಡಾಗಲಾರನು. ನಿನ್ನನ್ನು ನೋಡಿದರೆ ವೀರ ಕ್ಷತ್ರಿಯ ಕುಲೋದ್ಭವನಂತೆ ಕಾಣುವೆ; ನಿನ್ನ ಹೃದಯವು ಪವಿತ್ರವಾಗಿದೆ; ಅದನ್ನು ನೀನು ಅಪವಿತ್ರ ಮಾಡಲೆಳಸುತ್ತಿರುವೆ; ಹಾಗೆಂದಿಗೂ ಮಾಡ ದಿರು. ನೀನು ಸ್ವಬುದ್ಧಿಯನ್ನು ಹಾಳುಮಾಡಿಕೊಂಡು ಇತರರ ಪ್ರೇರಣೆಗೊಳಗಾಗಿ ಈ ನೀಚ ಕಾರ್ಯ ಪ್ರವರ್ತಕನಾಗಿರುವೆ. ನಿನ್ನ ಆತ್ಮದಲ್ಲಿ

ವಿಚಾರಿಸಿ ನೋಡು ; ಮನುಷ್ಯನೆಂದರೆ ಒಂದು ಹುಲ್ಲು ಬೀಜವೆಂದು ತಿಳಿದಿರುವೆಯೊ? ಅಲ್ಲ, ನಾನು ಶಪಥ ಪೂರ್ವಕವಾಗಿ ಹೇಳುವೆನು ಕೇಳು.—

ನಿನ್ನ ಛದ್ಮ ವೇಷವೇ ನಿನ್ನ ಕಾರ್ಯವನ್ನು ವ್ಯಕ್ತಪಡಿಸುತ್ತಿದೆ. ಪರ ಪ್ರೇರಣೆಯಿಂದಲೇ ನೀನು ಬಂದಿರುವೆಯಲ್ಲವೆ? ನಾನು ನಿನ್ನಲ್ಲಿ ಅಪರಾಧವನ್ನು ಮಾಡಿದ್ದರೆ ಅದಕ್ಕೆ ತಕ್ಕಷ್ಟು ಮಾತ್ರ ಶಿಕ್ಷೆಯನ್ನನು ಭವಿಸಲು ಸಿದ್ಧನಾಗಿರುವೆನು. ಹಾಗಲ್ಲದೆ, ಇದರಿಂದ ನಿನಗೇನಾದರೂ ಅಲ್ಪ ಸ್ವಲ್ಪ ದ್ರವ್ಯ ಲಾಭವುಂಟಾಗುವ ಹಾಗಿದ್ದು ಈ ಲಾಭಕ್ಕಾಗಿಯೇ ನೀನು ಈ ಅನ್ಯಾಯ ಪ್ರವರ್ತಕನಾಗಿದ್ದರೆ ನನ್ನ ಜೀವವನ್ನೂ ಆ ನಿನ್ನ ದ್ರವ್ಯ ಲಾಭವನ್ನೂ ವಿವೇಕದ ತಕ್ಕಡಿಯಲ್ಲಿ ತೂಕಮಾಡಿ ನೋಡು. ನಿನ್ನ ಲಾಭವೇ ಹೆಚ್ಚಾಗುವ ಹಾಗಿದ್ದರೆ ನನ್ನ ಪ್ರಾಣವನ್ನು ಸಂತೋಷ ದಿಂದ ಕೊಡುವೆನು. ನೋಡು, ಚೆನ್ನಾಗಿ ವಿಚಾರಿಸಿ ನೋಡು ; ನಿನ್ನ ದ್ರವ್ಯ ಲಾಭವೇ ಅತಿಶಯವಾದುದಾದರೆ ಇದೋ! ಈ ನನ್ನ ಹೃದಯ ವನ್ನು ನಿನ್ನ ಕಠಾರಿಯಿಂದ ತಿವಿ. ಎಲೈ ವೀರ ಕ್ಷತ್ರಿಯನೇ! ಪ್ರಾಣಿ ಹತ್ಯ ಮಾಡುವುದೂ, ಒಳ್ಳೆಯದನ್ನು ಕೆಡಿಸುವುದೂ, ಒಬ್ಬರನ್ನು ಹಾಳು ಮಾಡುವುದೂ ಬಹಳ ಸುಲಭ. ಆದರೆ ಅದು ಮಾನವೀ ಕೃತ್ಯವಲ್ಲ, ಕೇವಲ ರಾಕ್ಷಸೀ ಕೃತ್ಯ, ಪೈಶಾಚಿಕ ವ್ಯಾಪಾರ. ಒಂದು ಇರುವೆ ಮೊದಲ್ಗೊಂಡು ನಾನೂ ನೀನೂ ಈ ಜಗತ್ತೆಲ್ಲವೂ ಒಬ್ಬ ಪರಮಾತ್ಮ ನಿಂದಲೇ ಸೃಷ್ಟಿಸಲ್ಪಟ್ಟಿವೆ. ಹೀಗೆಂದ ಮೇಲೆ, ಆತನ ಮಕ್ಕಳಾದ ನಾವೆಲ್ಲರೂ ಸಹೋದರರು. ನಾವು ನಮ್ಮ ನಮ್ಮ ವಿಚಾರ ಶೂನ್ಯತೆ ಯಿಂದ ನೀಚ ಕೃತ್ಯಗಳನ್ನೆಸಗಿ, ಆ ದಯಾಘನನಾದ ನಮ್ಮ ತಂದೆಯ ಎದುರಿನಲ್ಲಿ ದುಷ್ಟ ಪಂಗಡದವರಾಗುವುದೆಂದರೇನು? ಇದರಿಂದ ನಮ್ಮ ತಂದೆಗೆ ಪ್ರೀತಿಯುಂಟಾಗುವುದೆ? ಎಂದಿಗೂ ಇಲ್ಲ. ನೋಡು, ನಿನ್ನ ಮಗನೊಬ್ಬನು ನಿನ್ನ ಎದುರಿನಲ್ಲಿಯೇ ನೀಚ ಕೃತ್ಯವನ್ನು ಮಾಡುತ್ತಿದ್ದರೆ ನೀನು ಸುಮ್ಮನಿರುವೆಯೊ? ಇಲ್ಲ. ಆ ಸರ್ವಾಂತರ್ಯಾಮಿಯಾದ ನಮ್ಮ ತಂದೆಯು ನಾವು ಪ್ರತಿ ಕ್ಷಣದಲ್ಲಿಯೂ ಮಾಡುತ್ತಿರುವ ನೀಚೋಚ್ಚ ಕೆಲಸಗಳನ್ನು ನೋಡುತ್ತಲೇ ಇರುವನೆಂಬುದು ನಿನಗೆ

ತಿಳಿಯದ ವಿಷಯವೇನೂ ಅಲ್ಲ. ಆ ದಯಾಮಯನು ಪ್ರಪಂಚವನ್ನೆಲ್ಲ ನೋಡುತ್ತ, ಆ ಆ ಪ್ರಾಣಿಗಳ ಕರ್ಮಾನುಸಾರವಾಗಿ ಫಲಾಫಲಗಳನ್ನು ಕೊಡುತ್ತಲೇ ಇರುವನು. ಚೆನ್ನಾಗಿ ವಿಚಾರಿಸು, ನಿನಗೆ ಸ್ವಲ್ಪ ಅವಧಿಯನ್ನು ಕೊಟ್ಟಿದ್ದೇನೆ. ಇಂದಿಗೆ ಹತ್ತನೆಯ ದಿವಸ ರಾತ್ರಿ ಮೂರು ಗಂಟೆಗೆ ಸರಿಯಾಗಿ, ಡೆಲ್ಲೀ ಪಟ್ಟಣದ ಬಳಿಯಲ್ಲಿ ಹರಿಯುವ ನದಿಯ ದಂಡೆಯ ಮೇಲೆ ನಾನು ನಿನಗಾಗಿ ಕಾದಿರುವೆನು; ಇದು ಖಂಡಿತ. ಅದುವರೆಗೂ ವಿಚಾರಿಸಿದುದರಲ್ಲಿ ನನ್ನ ಪ್ರಾಣಕ್ಕಿಂತಲೂ ನಿನ್ನ ಲಾಭವೇ ಅಧಿಕವಾದುದೆಂದು ತಿಳಿದುಬಂದರೆ, ಅಥವಾ ನನ್ನ ಅಪರಾಧವೇನೆಂಬುದನ್ನು ಸವಿಸ್ತಾರವಾಗಿ ನನಗೆ ಒಪ್ಪಿಗೆಯಾಗುವಂತೆ ತಿಳಿಸುವುದಾದರೆ, ನಾನು ಆನಂದದಿಂದ ಸಾಯುವುದಕ್ಕೆ ಸಿದ್ಧನಾಗಿರುವೆನು.

ಈ ರೀತಿಯಾಗಿ ವೃದ್ಧನು ಮನ ಮುಟ್ಟುವಂತೆ ಹೇಳಿದ ದೀರ್ಘ ಭಾಷಣದಿಂದ ಸೈತಾನ ಸಿಂಗನ ಮನಸ್ಸು ಚಲಿಸಿಹೋಯಿತು. ಅವನು ವೃದ್ಧನಿಗೆ ಸಲಾಮ್ ಮಾಡಿ, "ಆಗಲಿ, ನೀನು ಕೊಟ್ಟ ಅವಧಿಯವರೆಗೂ ವಿಚಾರಿಸುವೆನು" ಎಂದು ಅಲ್ಲಿ ನಿಲ್ಲದೆ ಹೊರಟುಹೋದನು. ಈ ಘಟನೆಯು ನಡೆದ ಸ್ವಲ್ಪ ಹೊತ್ತಿನ ವರೆಗೂ ವೃದ್ಧನು ವಿಚಾರಮಗ್ನನಾಗಿದ್ದು ತರುವಾಯ ಮೇಲಕ್ಕೆದ್ದು ಮುದುಕಿಯ ಶುಶ್ರೂಷೆಗೆ ತೊಡಗಿದನು. ಆಕೆಗೆ ಸ್ವಲ್ಪ ಆರೋಗ್ಯ ಲಾಭವುಂಟಾದಂತೆ ತೋರಿತು. ವೃದ್ಧನು ಅತ್ಯಾನಂದದೊಡನೆ ತನ್ನ ಮುಖವನ್ನು ಮೇಲಕ್ಕೆತ್ತಿ, "ಹೇ ದೇವಾ! ಎಲ್ಲವೂ ನಿನ್ನ ಕೃಪೆಯೇ ಸರಿ. ನಾನು ಕೈಕೊಂಡಿರುವ ಈ ಕಾರ್ಯದಲ್ಲಿ ನನಗೆ ಪೂರ್ಣಯಶಸ್ಸನ್ನು ದಯಪಾಲಿಸು" ಎಂದು ಹೇಳಿ ಸುಮ್ಮನಾದನು.

ಆ ರಾತ್ರಿಯೆಲ್ಲವೂ ಮೇಲೆ ಹೇಳಿದ ಮೇರೆಗೆ ಕಳೆಯಿತು. ಅರುಣೋದಯವಾಗುವ ವೇಳೆಗೆ ವೃದ್ಧಳಿಗೆ ಸಂಪೂರ್ಣವಾಗಿ ಆರೋಗ್ಯವುಂಟಾದಂತೆ ತೋರಿತು; ಹುಡುಗಿಯೂ ತನ್ನ ಮುದ್ದುಮುಖದಿಂದ ಆನಂದವನ್ನು ಹೊರಸೂಸುತ್ತ ಎದ್ದು ಕುಳಿತಳು.

## ನಾಲ್ಕನೆಯ ಪರಿಚ್ಛೇದ

ಹಾಗೂ ಹೀಗೂ ದಿನಗಳು ಕಳೆಯುತ್ತ ಬಂದುವು; ನಮ್ಮ ಪಾತ್ರಗಳಿಗೆ ಸಂಬಂಧಿಸಿದ ಹೆಚ್ಚು ವಿಷಯಗಳಾವುವೂ ನಡೆಯಲಿಲ್ಲ. ಹೀಗಿರುವಲ್ಲಿ, ಒಂದು ದಿನ ಡೆಲ್ಲೀ ಪಟ್ಟಣದ ಒಂದು ಬೀದಿಯಲ್ಲಿ ಒಬ್ಬ ಮನುಷ್ಯನು ಮನೆಗಳ ನೆರಳು ಬಿದ್ದು ಕತ್ತಲಾಗಿರುವ ಸ್ಥಳದಲ್ಲಿಯೇ ನಡೆದುಬರುತ್ತಿದ್ದನು. ಅವನು ಚಿಂತಾ ಮಗ್ನನಾಗಿರುವಂತೆ ತೋರುತ್ತಿದ್ದಿತು. ಅವನು ಹೋಗುತ್ತಿದ್ದ ಬೀದಿಯು ಡೆಲ್ಲೀ ನಗರದ ಒಂದು ಮೂಲೆಯಾಗಿದ್ದು, ಆ ದಿನ ರಾತ್ರಿ ಆ ಬೀದಿಯಲ್ಲಿ ಜನ ಸಂಚಾರವೇ ಇರಲಿಲ್ಲ; ಮಾರ್ಗ ಪ್ರತಿಬಂಧಕಗಳಾದ ಇತರ ಯಾವ ತೊಂದರೆಗಳೂ ಇರಲಿಲ್ಲ. ಹೋಗುತ್ತ ಹೋಗುತ್ತ ಎಲ್ಲಿಂದಲೋ ಒಂದು ಕೋಲಾಹಲ ಶಬ್ದವು ಆ ಮನುಷ್ಯನ ಕಿವಿಗೆ ಬಿದ್ದಿತು. ಅದನ್ನು ಕೇಳಿ ಚಮಕಿತನಾಗಿ ಅವನು ಅಲ್ಲಿಯೇ ನಿಂತು ಆಲಿಸಿದನು. ಕೋಲಾಹಲವು ಬರಬರುತ್ತ ಹೆಚ್ಚಿತು. ಅಲ್ಲಲ್ಲಿ ಅರನಿದ್ದೆಯಿಂದಿದ್ದ ಕೆಲವರು ಈ ಕಲಕಲವನ್ನು ಕೇಳಿ ತೀರ ಎಚ್ಚತ್ತು ತಮ್ಮ ಮನೆಯ ಕಿಟಕಿಗಳನ್ನೂ ಬಾಗಿಲುಗಳನ್ನೂ ತೆರೆದು ಗದ್ದಲವೇನೆಂದು ನೋಡುತ್ತಿದ್ದರು. ಇನ್ನು ಕೆಲವರು ಕಣ್ಣು ತಿಕ್ಕಿಕೊಳ್ಳುತ್ತ ಬೀದಿಗೆ ಬಂದು, "ಏನೆಲೆ? ಏನಾಯಿತೋ·· ······ಅದೇನು ಗದ್ದಲವೋ········" ಎಂದು ಕೂಗುತ್ತಿದ್ದರು. ಒಬ್ಬಿಬ್ಬರು ಕೂಗಾಟವು ಕೇಳಬರುತ್ತಿದ್ದ ಕಡೆಗೆ ಓಡತೊಡಗಿದರು. ಹೀಗೆ ಆ ಬೀದಿಯಲ್ಲಿಯೂ ಸಣ್ಣವರು ದೊಡ್ಡವರು ಸಹ ಎಚ್ಚತ್ತು ಹೊರಗೆ ಬಂದುದರಿಂದ, ಜನ ಸಮ್ಮರ್ದವು ಅತಿಶಯವಾಯಿತು. ಅನೇಕರು ಅನೇಕ ವಿಧವಾಗಿ ಮಾತನಾಡುತ್ತಿದ್ದರು. ಕೆಲವರು, "ಅಬ್ಬಬ್ಬಾ! ಭಯಂಕರವಾದ ಬೆಂಕಿ! ಅಯ್ಯೋ! ಹೋಯಿತು ಬನ್ನಿರೋ······" ಎಂದು ಗಟ್ಟಿಯಾಗಿ ಕೂಗುತ್ತಿದ್ದರು. ಏನೂ ಅರಿಯದವನೊಬ್ಬನು ಆಗ ತಾನೆ ಎದ್ದು ಬಂದು, "ಏನು ಗದ್ದಲ? ಏಕೆ ಕೂಗುತ್ತೀರಿ?" ಎಂದು ಕೇಳಲು, ನೆರೆದವರಲ್ಲೊಬ್ಬನು, "ಯಾರಿಗೆ ಗೊತ್ತೊ? ಮಗನೇ! ಈಗಿನ ನಮ್ಮ ದೊರೆಯಾದ ಬಾಬರನು ಹಿಂದೂ ಜನಗಳ ಮೇಲಿನ ದ್ವೇಷದಿಂದ ಈ ಡೆಲ್ಲೀ ಪಟ್ಟಣವನ್ನೇ ಸುಟ್ಟುಹಾಕಬೇಕೆಂದಾಲೋಚಿಸಿ ಅಪ್ಪಣೆ

ಮಾಡಿದನೊ ಏನೊ? ಕಾಣುವುದಿಲ್ಲವೆ ಬೆಂಕಿ? ಪ್ರಳಯ ಕಾಲದ ಕಾಳ್ಕಿಚ್ಚಿನಂತೆ ಉರಿಯುತ್ತಿದೆ. ನಮ್ಮ ಮನೆ ಮಾತ್ರ ಉಳಿದರೆ ಸಾಕು'' ಎಂದನು. ಇವನಾಡಿದ ಮಾತುಗಳು, ನಾವು ಹಿಂದೆ ಹೇಳಿದಂತೆ ಕತ್ತಲೆಯಲ್ಲಿ ನಿಂತಿದ್ದ ಮನುಷ್ಯನಿಗೆ ಕೇಳಿಸಿತು. ಅವನು ತನ್ನಲ್ಲಿ ತಾನೇ, "ಇವನಿಗೇನು ತಲೆ ತಿರುಗಿದೆಯೊ? ಹುಚ್ಚೋ? ಪಿಶಾಚಿಯೋ ಹಿಡಿದಿದೆಯೊ? ಯಾರಿಗೆ ಗೊತ್ತು! ಯಾ ಅಲ್ಲಾ!'' ಎಂದು ಹೇಳುತ್ತ ಗಲಾಟೆಯಾಗುತ್ತಿದ್ದ ಕಡೆಗೆ ಓಡಿಹೋದನು.

ಮೇಲೆ ಹೇಳಿದಂತೆ, ಆ ಬೀದಿಯ ಜನರಿಗೆ ಬಾಬರಷಹನ ವಿಷಯದಲ್ಲಿ ದುರಭಿಪ್ರಾಯವಿದ್ದಿತು. ಇದರಲ್ಲಿ ಒಂದು ವಿಶೇಷವಿದೆ: ಒಂದು ವರ್ಷದ ಕೆಳಗೆ ಬಾಬರನು ತುರ್ಕಸ್ಥಾನದಿಂದ ಇಲ್ಲಿಗೆ ದಂಡೆತ್ತಿ ಬಂದು ಪಾಣಿಪತ್ತದ ರಣಕ್ಷೇತ್ರದಲ್ಲಿ ಇಬ್ರಾಹಿಂ ಲೋಡಿಯೊಡನೆ ಯುದ್ಧಮಾಡಿ ಅವನನ್ನು ಕೊಂದದ್ದೂ, ಒಂದಾದ ಮೇಲೊಂದು ಮುಖ್ಯ ಮುಖ್ಯ ಪಟ್ಟಣಗಳನ್ನು ಗೆದ್ದುಕೊಂಡದ್ದೂ, ಇದರಿಂದ ಲಕ್ಷಾಂತರಗಟ್ಟಲೆ ಪ್ರಾಣಹಾನಿಯಾದದ್ದೂ—ಇವೆಲ್ಲವನ್ನೂ ನೋಡಿ, ಕೇಳಿ, ಜನಗಳ ಮನಸ್ಸಿಗೆ ಒಂದು ವಿಧವಾದ ಭಯವುಂಟಾಗಿದ್ದಿತು; ಇದು ಸಹಜವಾದುದೇ ಸರಿ. ಆದರೆ ನ್ಯಾಯ ಪಕ್ಷಪಾತಿಯಾದ ಬಾಬರನು ಕ್ರೂರನಾದ ಮನುಷ್ಯನಲ್ಲವೆಂಬುದು ಮುಂದೆ ಗೊತ್ತಾಗುವುದು.

ಇತ್ತ, ಬೆಂಕಿ ಹೊತ್ತಿದ್ದ ಸ್ಥಳದಲ್ಲಿ ಜನಗಳ ತಿರುಗಾಟವೂ ಕೂಗಾಟವೂ ಹೆಚ್ಚಿದುವು. ಬಿಳಿಯ ಟೋಪಿಯನ್ನು ಹಾಕಿಕೊಂಡಿದ್ದ ಒಬ್ಬ ಮುದುಕನು ಬಹಳ ಸಾಹಸ ಮಾಡುತ್ತಿದ್ದನು. ಈ ಬಿಳಿಯ ಟೋಪಿಯ ಮುದುಕನು ಯಾರೆಂಬುದನ್ನು ವಾಚಕರು ಮರೆತಿರಲಾರರು: ಹಿಂದೆ ಸತ್ರದಲ್ಲಿ ನಮಗೆ ಪರಿಚಿತನಾದ ಮುದುಕನೇ ಇವನು; ಡೆಲ್ಲೀ ಪಟ್ಟಣದ ಬೀದಿಯಲ್ಲಿ ಕತ್ತಲೆಯಲ್ಲಿ ತಿರುಗಾಡುತ್ತಿದ್ದವನೂ ಇವನೇ! ಇವನು ಇಲ್ಲಿಗೇಕೆ ಬಂದನು? ವಿಚಾರ ಮಾಡೋಣ.

ಎಲ್ಲ ಕಡೆಗೂ ನೋಡುತ್ತ ಆ ಮುದುಕನು ಬೆಂಕಿಯುರಿಯುತ್ತಿದ್ದ ಬೀದಿಗೆ ಬಂದಿದ್ದನು. ಅದೊಂದು ದೊಡ್ಡ ಬೀದಿ; ಎರಡು ದೊಡ್ಡ

ಮನೆಗಳು ಅಗ್ನಿ ನಾರಾಯಣನಿಗೆ ಆಹುತಿಯಾಗುತ್ತಿದ್ದುವು. ಬೆಂಕಿ ಹೊತ್ತಿ ಬಹಳ ಹೊತ್ತಾಗಿದ್ದಿತು. ಬಹಳ ಹಸಿದವನಿಗೆ ಬೇಕಾದಷ್ಟು ಆಹಾರವು ದೊರೆತರೆ ಆಗ ಅವನು ಅವಸರವಸರವಾಗಿ ಹೇಗೆ ಹೊಟ್ಟೆ ತುಂಬಿಕೊಳ್ಳುವನೋ, ಯಾರೂ ಇಲ್ಲದ ಕಾಲದಲ್ಲಿ ಹಣ್ಣಿನ ಅಂಗಡಿಗೆ ನುಗ್ಗಿದ ಕೋತಿಯು ಗಬಗಬನೆ ಹೇಗೆ ಬಾಯಿ ತುಂಬಿಕೊಳ್ಳುವುದೋ, ಕಳ್ಳತನದಿಂದ ಗದ್ದೆ ಹೊಲಗಳಿಗೆ ನುಗ್ಗಿದ ದನಗಳು ಅಲ್ಲಿರುವ ಪೈರನ್ನು ಹೇಗೆ ಮೇದು ಹೊಟ್ಟೆ ತುಂಬಿಕೊಳ್ಳುವುವೋ ಹಾಗೆಯೇ, ಎಷ್ಟೋ ದಿನಗಳಿಂದ ಉಪವಾಸವಿದ್ದ ಅಗ್ನಿಗೆ ಈ ದಿನ ಸಂಪೂರ್ಣ ಗ್ರಾಸವು ದೊರೆತು, ಸಿಕ್ಕಿದುದನ್ನೆಲ್ಲ ಒಂದೇ ಸಾರಿ ನುಂಗಬೇಕೆಂದು ಸರ್ವತೋ ಮುಖವಾದ ತನ್ನ ನಾಲಗೆಗಳನ್ನು ಬಹು ಉದ್ದವಾಗಿ ಚಾಚಿದ್ದನು. ಪರೋಪಕಾರಿಯಾದ ಆ ವೃದ್ಧನು ಅಲ್ಲಿ ನಿಂತು ಅಗ್ನಿ ನಾರಾಯಣನ ಲೀಲಾ ನಾಟಕದ ವೈಚಿತ್ರ್ಯವನ್ನು ನೋಡುತ್ತ ಆ ಮನೆಗಳ ಜನರಿಗೆ ಹೇಗೆ ಸಹಾಯ ಮಾಡಬಹುದೆಂದು ತನ್ನಲ್ಲಿಯೇ ತವಕಪಡುತ್ತಿದ್ದನು. ಅಲ್ಲಿ ನೆರೆದಿದ್ದ ನೂರಾರು ಜನರಲ್ಲಿ ಕೆಲವರು ಮಾತ್ರ ಬೆಂಕಿಯನ್ನಾರಿಸು ವುದರಲ್ಲಿ ಮುಂದಾಳುಗಳಾಗಿದ್ದರು; ಕೆಲವರು ಹರಟೆಹೊಡೆಯು ತ್ತಿದ್ದರು; ಕೆಲವರು ಈ ಗದ್ದಲದಲ್ಲಿಯೇ ತಮಗೇನಾದರೂ ಪದಾರ್ಥ ಗಳು ಸಿಕ್ಕಬಹುದೇನೋ ಎಂಬ ನೀಚಾಭಿಪ್ರಾಯವುಳ್ಳವರಾಗಿದ್ದರು; ಇನ್ನು ಕೆಲವರು ಬರಿಯ ಕೂಗಾಟದಿಂದ, ಎಲೋ! ನೀರು ತನ್ನಿರೋ! ನೀರು!....ನೀರು!! ಅಗೋ, ಅಲ್ಲಿ ಬಿತ್ತೋ! ಮೈಮೇಲೆ ಬಿದ್ದೀತೋ!! ಜೋಕೆ! ಹುಷಾರ್! ಎಂದು ಅಬ್ಬರ ಮಾಡುತ್ತ ಗದ್ದಲವನ್ನು ಹೆಚ್ಚಿಸು ತ್ತಿದ್ದರು.

ಹೀಗೆ ಜನ ಸಂದಣಿಯೇನೋ ವಿಪರೀತವಾಗಿ, ಉಪಕಾರಿಗಳು ಮಾತ್ರ ವಿರಳರಾಗಿದ್ದರು. ಈ ಅತ್ಯಲ್ಪ ಸಂಖ್ಯೆಯ ಉಪಕಾರಿಗಳು ಧಗ ಧಗನೆ ಉರಿಯುತ್ತಿದ್ದ ಬೆಂಕಿಯೊಡನೆ ಎಷ್ಟು ಹೊತ್ತು ಹೊಡೆದಾಡ ಬಲ್ಲರು? ಸ್ವಲ್ಪ ಹೊತ್ತಿನಲ್ಲಿಯೇ ಆ ಮನೆಗಳ ಸಮೀಪಕ್ಕೆ ಹೋಗಲು ಕೂಡ ಅವಕಾಶವಿಲ್ಲದಂತೆ ಉರಿಯು ಹೆಚ್ಚಿತು. ಆ ಮನೆಗಳ ಯಜ ಮಾನರು ಎಲ್ಲಿಯೋ ದೂರದಲ್ಲಿ ನಿಂತು, ಉಕ್ಕಿ ಬರುತ್ತಿರುವ ದುಃಖದ

ವೇಗವನ್ನು ತಡೆಯಲಾರದೆ, ಹೋ ಯೆಂದು ಅಳುತ್ತಿದ್ದರು. ಹೆಂಗುಸರ ರೋದನವಂತೂ ಹೇಳಲಸಾಧ್ಯವಾಗಿದ್ದಿತು. ಕೆಲವರು ಇವರನ್ನು ಸಮಾಧಾನಪಡಿಸುತ್ತಿದ್ದರು. ಒಬ್ಬ ಸ್ತ್ರೀಯು ಎದೆಯನ್ನು ಬಡಿದು ಕೊಳ್ಳುತ್ತ ಆ ಬೆಂಕಿಯಲ್ಲಿ ಬೀಳುವುದಕ್ಕೆ ಹೋಗುತ್ತಿದ್ದಳು. ಇನ್ನಿಬ್ಬರು ಅವಳನ್ನು ಹಿಡಿದುಕೊಂಡು ಮುಂದಕ್ಕೆ ಬಿಡದೆ ಸಮಾಧಾನ ಮಾಡು ತ್ತಿದ್ದರು. ಅವಳು, "ಅಯ್ಯೋ! ನನ್ನ ಮುದ್ದು ಮಗುವು ಈ ಮನೆ ಯೊಳಗೇ ಉಳಿದಿರುವುದಲ್ಲಾ! ಅವನನ್ನು ಬಿಟ್ಟು ನಾನು ಇಲ್ಲಿ ಹೇಗೆ ಇರಲಿ? ಅಪ್ಪಾ, ಪುಣ್ಯಾತ್ಮರಿರಾ! ಯಾರಾದರೂ ನನ್ನ ಮಗುವನ್ನು ಬದುಕಿಸಿಕೊಡಿರಿ; ಆಗದಿದ್ದರೆ ನನ್ನನ್ನೂ ಈ ಬೆಂಕಿಯಲ್ಲಿ ಹಾಕಿಬಿಡಿರಿ! ನಾನೂ ನನ್ನ ಮಗುವಿನೊಡನೆ ಪರಲೋಕಕ್ಕೆ ಹೋಗುವೆನು; ನನ್ನನ್ನು ಬಿಟ್ಟುಬಿಡಿರಿ, ಅಯ್ಯೋ! ಬಿಟ್ಟುಬಿಡಿರಿ" ಎಂದು ರೋದನ ಮಾಡು ತ್ತಿದ್ದಳು.

ಅವಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದವರೂ ಸಮಾಧಾನ ಪಡಿಸುತ್ತಿದ್ದವರೂ ಬಹಳ ದುಃಖಪಟ್ಟರೂ ಮಾಡುವುದೇನು? ಉರಿ ಯುವ ಬೆಂಕಿಯಲ್ಲಿ, ತಮ್ಮ ಜೀವದ ಹಂಗು ತೊರೆದು, ದುಮುಕುವ ರಾರು? ಹೀಗಿರುವಲ್ಲಿ, ವೃದ್ಧ ಮಹಾಶಯನು ಅಲ್ಲಿಗೆ ಬಂದು ವಿಚಾರ ವೇನೆಂದು ಕೇಳಿದನು. ಅಲ್ಲಿದ್ದವರಲ್ಲೊಬ್ಬನು "ಈ ಹೆಂಗುಸಿನ ಮಗುವು ಬೆಂಕಿ ಹೊತ್ತಿರುವ ಮನೆಯೊಳಗೆ ಉಳಿದಿದ್ದಾನೆ" ಎಂದನು. ವೃದ್ಧನು, "ಅಯ್ಯೋ! ಇಷ್ಟು ಮಂದಿಯಲ್ಲಿ ಯಾರೊಬ್ಬರೂ ಆ ಮಗುವನ್ನು ಹೊರಗೆ ತರಲು ಪ್ರಯತ್ನಿಸಲಿಲ್ಲವೇ?" ಎಂದನು. ಮತ್ತೊಬ್ಬನು, "ಅಯ್ಯಾ! ನಿನಗೆ ಅರುಳು ಮರುಳು ಎಂದು ಕಾಣುತ್ತದೆ. ಇಂತಹ ಭಯಂಕರವಾದ ಅಗ್ನಿಜ್ವಾಲೆಯಲ್ಲಿ ಯಾರು ನುಗ್ಗಿ ಹೋದಾರು?" ಎಂದನು.

ವೃದ್ಧನು, "ಧಿಕ್ಕಾರ! ಧಿಕ್ಕಾರ!! ಎಲೈ ಜನರೇ, ಪಾಪ! ಆ ಬಡ ಹೆಂಗುಸು ತನ್ನ ಮಗುವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿರುವಾಗ ಅವಳ ದುಃಖವನ್ನು ನಿವಾರಿಸಲು ನಿಮ್ಮಲ್ಲೊಬ್ಬನಾದರೂ ಪ್ರಯತ್ನಿಸ ಲಿಲ್ಲವೇ? ಇಷ್ಟು ಮಂದಿ ಶಕ್ತರು ಇಲ್ಲಿ ಸೇರಿದ್ದರೂ, ಬರಿಯ

ಶುಷ್ಕೋಪಚಾರದ ಮಾತುಗಳನ್ನಾಡುತ್ತ ಆತ್ಮ ಪೌರುಷವನ್ನು ಹೇಳಿಕೊಳ್ಳುತ್ತಿರುವಿರಲ್ಲದೆ ಪರೋಪಕಾರ ಬುದ್ಧಿಯು ಒಬ್ಬನಲ್ಲಿಯೂ ಇರುವಂತೆ ಕಾಣುವುದಿಲ್ಲ. ಇದು ಪರಮಾಶ್ಚರ್ಯವು, ವ್ಯಾಸವ ಜನ್ಮಕ್ಕೆ ಲಾಂಛನಾಸ್ಪದವು" ಎಂದು ಹೇಳುತ್ತ ತನ್ನ ಮೈಮೇಲಿನ ಬಟ್ಟೆಗಳನ್ನೆಲ್ಲ ತೆಗೆದು ಒಂದು ಕಡೆಯಲ್ಲಿಟ್ಟು, ನೀರನ್ನು ಹೊತ್ತು ತರುತಿದ್ದವನೊಬ್ಬನ ಕೈಯಲ್ಲಿದ್ದ ಕೊಡವನ್ನು ತೆಗೆದುಕೊಂಡು, ಮಾರ್ಗದಲ್ಲಿರುವ ದೂಳನ್ನು ಕಲಸಿ ಕೆಸರು ಮಾಡಿ, ಆ ಕೆಸರನ್ನೆಲ್ಲ ಮೈಗೆ ಬಳಿದುಕೊಂಡನು. ಕೂಡಲೆ, 'ಯಾ ಅಲ್ಲಾ ಹೋ' ಎಂದು ಕೂಗುತ್ತ ಉರಿಯುತ್ತಿದ್ದ ಮನೆಯ ಸಮೀಪಕ್ಕೆ ನುಗ್ಗಿದನು. ಅಲ್ಲಿ ನೆರೆದವರಲ್ಲೊಬ್ಬನು, "ಎಲೋ ಮುದುಕ! ನಿನಗೆ ಹುಚ್ಚು ಹಿಡಿದಿದೆಯೇನು? ಸ್ವಲ್ಪ ಹಾಗೆಯೇ ಕಾಣುತ್ತದೆ" ಎಂದನು. ಮತ್ತೊಬ್ಬ ಚಾರ್ವಾಕನು "ಸರಿಯಿರಿ, ದಾರಿ ಬಿಡಿರಿ, ಮುದುಕನಿಗೆ ಮಾರ್ಗವನ್ನು ತೋರಿಸಿರಿ; ಅವನು ದ್ವಿತೀಯ ದಿಕ್ಪಾಲಕನ ಸಂಗಡ ತೃತೀಯನ ಮನೆಗೆ ಅತಿಥಿಯಾಗಿ ಹೋಗುವುದಕ್ಕೆ ಹೊರಟಿದ್ದಾನೆ. ಹೇಗಾದರೂ ಮುದುಕ; ಅಗ್ನಿಗೊಂದು ನರ ಪಶುವು ಆಹುತಿಯಾಗಲಿ; ಹೋಗಲಿ ಬಿಟ್ಟುಬಿಡಿರೊ" ಎಂದು ಮುದುಕನೆದುರಿಗೆ ಬಂದು ನಿಂತು, "ಸ್ವಾಮಿಾ, ಪರಾಕು! ಹೀಗೆ ದಯಮಾಡಿಸಬೇಕು; ಇತ್ತ ಕಡೆ! ಸಾವಧಾನ!" ಎಂದು ಹಾಸ್ಯಮಾಡಿದನು. ಮುದುಕನಿಗೆ ಬಹಳ ಕೋಪ ಬಂದಿತು. ಆದರೂ ಅದನ್ನು ನುಂಗಿಕೊಂಡು, "ಅಯ್ಯಾ, ನಾನು ಹುಚ್ಚ, ನೀವೆಲ್ಲರೂ ಬುದ್ಧಿವಂತರು; ತೃತೀಯ ದಿಕ್ಪಾಲಕನ ಮನೆಗೆ ನೀನು ಬರಲೇ ಬೇಡ. ನೀನು ಒಬ್ಬನು ಮಾತ್ರ ಇಲ್ಲಿಯೇ ಇರತಕ್ಕವನೆಂದು ಕಾಣುವುದು. ಇರಲಿ, ಈಗ ವಾಗ್ವಾದ ಮಾಡುತ್ತ ಮಾತನಾಡುವ ವೇಳೆಯಲ್ಲ" ಎಂದು ಮನೆಯ ಕಡೆಗೆ ತಿರುಗಿ ದೃಷ್ಟಿಸಿ ನೋಡಿ, ಮನೆಯೊಳಗೆ ನುಗ್ಗಿದನು. ಅದನ್ನು ನೋಡಿದವರೆಲ್ಲರೂ ಆಶ್ಚರ್ಯ ಮಗ್ನರಾಗಿ ಅತ್ತ ಕಡೆಗೇ ದೃಷ್ಟಿಯಿಟ್ಟು ನೋಡುತ್ತಿದ್ದರು. ಯುವಕರಾದ ಕೆಲವರಿಗೆ ಲಜ್ಜೆಯುಂಟಾಯಿತು. ಕೆಲವರು, "ಅಬ್ಬಬ್ಬಾ! ಎಂತಹ ಸಾಹಸ! ಅಪಾರವಾದ ಉರಿಯಲ್ಲಿ ನುಗ್ಗಿ ಅವನು ಒಳಗೆ ಹೇಗೆ ಹೋಗುತ್ತಾನೆ?

ಹೋದರೆ ಹಿಂದಿರುಗಿ ಹೇಗೆ ಬರುತ್ತಾನೆ? ಮುದುಕನು ಅನ್ಯಾಯ ವಾಗಿ ಒಳಗೆಯೇ ಸತ್ತುಹೋಗುತ್ತಾನೆ; ಇದು ನಿಶ್ಚಯ'' ಎನ್ನು ತ್ತಿದ್ದರು. ಕೆಲವ್ವರು, ''ಬುಡ್ಡಾ ಮಾಮಾ! ಹೆದರಬೇಡ; ನಿನಗೆ ಎಲ್ಲ ಸೌಖ್ಯಗಳೂ ತೀರಿಹೋಗಿರುತ್ತವೆ; ಇನ್ನು ನೀನು ಬದುಕಿದ್ದುದರಿಂದ ಆಗಬೇಕಾದುದೇನೂ ಇಲ್ಲ; ಸಂತೋಷದಿಂದ ಸ್ವರ್ಗಕ್ಕೆ ಹೋಗು'' ಎನ್ನುತ್ತಿದ್ದರು. ಇನ್ನು ಕೆಲವರು ಪಾಪಭೀರುಗಳಾದವರು, ''ದೇವರು ಮುದುಕನನ್ನು ರಕ್ಷಿಸಲಿ, ಅವನು ಕೈಕೊಂಡ ಕಾರ್ಯವು ಸಫಲ ವಾಗಲಿ'' ಎಂದು ಆಶೀರ್ವದಿಸಿದರು.

ಹೀಗೆ ಅಲ್ಲಿ ನೆರೆದ ಬಗೆಬಗೆಯ ಜನರು ತಮ್ಮ ಮನಸ್ಸಿಗೆ ತೋರಿ ದಂತೆ ಬಗೆಬಗೆಯ ಮಾತುಗಳನ್ನಾಡುತ್ತಿದ್ದರು. ನಮ್ಮ ವೃದ್ಧ ಸರದಾರನು ಅಷ್ಟು ಹೊತ್ತಿಗೆ ಒಳಹೊಕ್ಕು ನೋಡುವಲ್ಲಿ, ಮನೆಯೊಳ ಗೆಲ್ಲ ಹೊಗೆಯು ದಟ್ಟವಾಗಿ ತುಂಬಿಕೊಂಡಿದ್ದಿತು; ಅಗ್ನಿಜ್ವಾಲೆಯು ಇನ್ನೂ ಪ್ರವೇಶಿಸಿರಲಿಲ್ಲ. ವೃದ್ಧನು ಸ್ವಲ್ಪ ಹೊತ್ತು ನಿಂತು ಭಗವಂತ ನನ್ನು ಪ್ರಾರ್ಥಿಸಿದನು. ಇವನ ಪ್ರಾರ್ಥನೆಯು ಆ ಪರಾತ್ಪರನೂ ಸರ್ವಾಂತರ್ಯಾಮಿಯೂ ಆದ ಭಗವಂತನಿಗೆ ಕೇಳಿಸಿರಬೇಕು: ವೃದ್ಧನು ಮನೆಯನ್ನೆಲ್ಲ ಹುಡುಕುತ್ತ, ಯಾರಾದರೂ ಕೂಗಿಕೊಳ್ಳುತ್ತಿರುವರೋ ಏನೋ ಎಂದು ಅಲ್ಲಲ್ಲಿ ನಿಂತು ಆಲಿಸುತ್ತಿದ್ದನು; ಆದರೆ ಹೊರಗೆ ನೆರೆದ ಜನರ ಕೋಲಾಹಲವೂ, ಬೆಂಕಿಯಿಂದ ಅರೆವಾಸಿ ಸುಟ್ಟು ಬೀಳು ತ್ತಿರುವ ಗಳಗಳೂ ತೊಲೆಗಳೂ ಮುಂತಾದ ಪದಾರ್ಥಗಳ ಕಟಕಟ ಶಬ್ದವೂ ಮಾತ್ರವೇ ಕೇಳಿಸುತ್ತಿದ್ದಿತು. ಮನೆಯ ಸಂದುಗೊಂದಿ ಗಳನ್ನೆಲ್ಲ ಹುಡುಕಿದುದಾಯಿತು. ಕೊನೆಗೆ ವೃದ್ಧನು ಮುಂಭಾಗದ ದಿವಾನಖಾನೆಗೆ ಬಂದನು. ಸುತ್ತಲೂ ನೋಡುತ್ತಿರುವಾಗ ಅಲ್ಲೊಬ್ಬ ಎಂಟು ವರ್ಷದ ಬಾಲಕನು ಕಕ್ಕಾಬಿಕ್ಕಿಯಾಗಿ, ದಿಕ್ಕು ತೋರದೆ ಭ್ರಾಂತನಾಗಿ ಅಲೆಯುತ್ತಿದ್ದನು. ಅವನನ್ನು ನೋಡಿದ ಕೂಡಲೆ ವೃದ್ಧ ನಿಗೆ ಅತ್ಯಾನಂದವಾಯಿತು; ಆ ಬಾಲಕನೂ ಇವನನ್ನು ನೋಡಿ ಇವನ ಮೃಣ್ಮಯ ವೇಷದಿಂದ ಭಯವುಂಟಾಗಿ ಚಿಟ್ಟನೆ ಚೀರಿದನು. ಕೂಡಲೆ ವೃದ್ಧನು ಅವನಿದ್ದಲ್ಲಿಗೆ ಬಂದು, ''ಮಗೂ! ಬೆದರಬೇಡ!'' ಎಂದು

ಪ್ರೇಮದಿಂದ ತಬ್ಬಿಕೊಂಡು ಮುದ್ದಿಟ್ಟು, "ಹೇ ಭಗವನ್ ! ನಿನ್ನ ಅಂತಃಕರಣ ಪೂರ್ವಕವಾದ ಆಶೀರ್ವಾದವು ನನ್ನ ತಲೆಯ ಮೇಲಿರಲಿ ! ಇಂದು ನಾನು ಕೃತಾರ್ಥನಾದೆನು" ಎಂದನು. ಆ ಬಾಲಕನು ಭಯಂಕರವಾದ ಆ ಅಗ್ನಿಜ್ವಾಲೆಯಲ್ಲಿ ಸಿಕ್ಕುಬಿದ್ದಿದ್ದರೂ ಅವನ ಪ್ರಜ್ಞಾ ಶಕ್ತಿಯು ಲೋಪವಾಗಿರಲಿಲ್ಲ; ಅವನು ಸ್ವಲ್ಪ ಮಟ್ಟಿಗೆ ಧೈರ್ಯಸ್ಥನಾಗಿದ್ದನೆಂದೇ ಹೇಳಬಹುದು. ಇದನ್ನು ನೋಡಿದ ಮೇಲಂತೂ ವೃದ್ಧನಿಗೆ ಪರಮಾಶ್ಚರ್ಯವಾಯಿತು. ಬಾಲಕನನ್ನು ಪುನಃ ಮುದ್ದಿಸಿ ವೃದ್ಧನು, "ಮಗೂ ! ನೀನಿನ್ನು ಎಳ್ಳಷ್ಟೂ ಭಯಪಡಬೇಡ; ನಾನು ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಲು ಬಂದಿರುವೆನು. ನಿನಗೆ ಅಷ್ಟು ಭಯವುಂಟಾದಂತೆ ತೋರುವುದಿಲ್ಲ; ಅಂಜಿಕೆಯಾಗಲಿಲ್ಲವೆ?" ಎಂದನು. ಅಯ್ಯಾ! ಮೊದಲು ಮೊದಲು ನನಗೆ ಸ್ವಲ್ಪ ಭಯವಾಯಿತು. ಆದರೆ ನಮ್ಮ ತಾಯಿಯು, "ಆಪತ್ಕಾಲದಲ್ಲಿ ಧೈರ್ಯವನ್ನು ತಾಳಬೇಕು" ಎಂದು ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು; ಅಲ್ಲದೆ, "ಯಾವನು ವೀರ ಪುರುಷನೋ ಅವನಿಗೆ ಹೆದರಿಕೆಯೇ ಇಲ್ಲ" ಎಂತಲೂ ಹೇಳಿದ್ದಳು; ನಾನೂ ವೀರ ಪುರುಷನೇ ಅಲ್ಲವೆ ! ನನಗೆ ಭಯ ವೆಲ್ಲಿಯದು ?" ಎಂದನು. ವೃದ್ಧನು ತನ್ನ ಮನಸ್ಸಿನಲ್ಲಿ ಆ ಬಾಲಕನನ್ನು ಮೆಚ್ಚಿಕೊಳ್ಳುತ್ತ, ಅತ್ಯಾನಂದವು ಉಕ್ಕೇರಿ ಬರಲು, ಪ್ರೇಮಾಧಿಕ್ಯ ದಿಂದ ಬಾಲಕನನ್ನು ಮರಳಿ ಬಿಗಿದಪ್ಪಿ, "ಶಹಬಾಸ್ ! ನೀನು ವೀರ ಪುರುಷನೇ ಸರಿ ! ನಿನ್ನ ಹೆಸರೇನು ?" ಎನ್ನಲು, "ನನ್ನ ಹೆಸರು ವೀರಸಿಂಗ" ಎಂದಾ ಬಾಲಕನು ಹೇಳಿದನು.

ವೃದ್ಧ.—"ಭಲಾ ! ಭಲಾ ! ನಿನ್ನ ಹೆಸರು ಅನ್ವರ್ಥವಾಗಿರುವುದು. ನಿನ್ನನ್ನು ಪಡೆದ ತಾಯಿ ತಂದೆಗಳೇ ಧನ್ಯರು, ಬಾ ! ಇನ್ನು ಇಲ್ಲಿ ನಿಂತು ಮಾತನಾಡಲು ಅವಕಾಶವಿಲ್ಲ; ಬೆಂಕಿಯು ಹತ್ತಿರಕ್ಕೆ ಬರುತ್ತಿದೆ; ನಿನ್ನನ್ನು ಹೊರಗೆ ಎತ್ತಿಕೊಂಡು ಹೋಗುವೆನು" ಎಂದು ಅವನನ್ನು ತನ್ನ ಹೆಗಲಿನ ಮೇಲೆ ಕುಳ್ಳಿರಿಸಿಕೊಂಡು ಸುಡುತ್ತಿರುವ ಆ ಮನೆಯಿಂದ ಸುರಕ್ಷಿತವಾಗಿ ಹೊರಗೆ ಬಂದು ನಿಂತನು.

ಅಲ್ಲಿ ನೆರೆದಿದ್ದವರು ಇದನ್ನು ನೋಡಿದ ಕೂಡಲೆ ಏಕ ಕಂಠದಿಂದ,

"ಶಹಬಾಸ್! ಭಲಾ ಭಲಾ! ಬಂದೇಬಿಟ್ಟನು! ಹುಡುಗನನ್ನೂ ಕರೆತಂದಿರುವನು ನಮ್ಮ ಮುದುಕ!" ಎಂದು ಕೂಗಿಕೊಂಡರು. ವೃದ್ಧನು ಈಚೆಗೆ ಬಂದು ಹುಡುಗನನ್ನು ಕೆಳಗಿಳಿಸಿ, "ಮಗೂ, ಏನಾದರೂ ತೊಂದರೆಯಾಯಿತೇನು? ಬೆಂಕಿಯ ಝಳವು ಎಲ್ಲಿಗಾದರೂ ಸೋಕಿತೇನು?" ಎಂದು ಕೇಳಿದನು. ಬಾಲಕನು, "ಏನೂ ಇಲ್ಲ ಮಹಾರಾಯಾ! ನಮ್ಮ ತಾಯಿ ಎಲ್ಲಿರುವಳು?" ಎಂದು ಕೇಳಿದನು. ನಿಮ್ಮ ತಾಯಿಯು ಯಾರೋ? ಆಕೆ ಎಲ್ಲಿರುವಳೋ ನನಗೆ ತಿಳಿಯದು; ನೋಡೋಣ, ನನ್ನ ಸಂಗಡಲೇ ಬಾ!" ಎಂದು ವೃದ್ಧನು ಮುಂದೆ ಹೊರಡಲು, ಬಾಲಕನೂ ಅವನ ಹಿಂದೆಯೇ ಹೊರಟನು. ಅಲ್ಲಿದ್ದ ಜನಗಳ ಗುಂಪಿನಲ್ಲಿ ವೃದ್ಧನ ಸಾಹಸಕಾರ್ಯವನ್ನು ಕುರಿತು ಅನೇಕರು ಸ್ತೋತ್ರ ಮಾಡುತ್ತಿದ್ದರು. ಇವರಿಬ್ಬರೂ ದಾರಿ ಹಿಡಿಸಿಕೊಂಡು ಬಂದು ಆ ಬಾಲಕನ ತಾಯಿಯು ಎಲ್ಲಿ ಬಿದ್ದು ಅಳುತ್ತಿದ್ದಳೋ ಅಲ್ಲಿಗೆ ಬಂದು ಸೇರಿದರು. ಆಕೆಯು ದುಃಖಾತಿಶಯದಿಂದ ಮೈಮರೆತು ನೆಲದಲ್ಲಿ ಬಿದ್ದು ಮೂರ್ಛೆ ಹೋಗಿದ್ದಳು. ಅವಳನ್ನು ಅನೇಕರು ಎಚ್ಚರಗೊಳಿಸಲು ಪ್ರಯತ್ನಿಸುತ್ತಿದ್ದರು. ಇದನ್ನು ನೋಡಿ ವೃದ್ಧನು, "ಮಗೂ! ಈ ವೇಳೆಯಲ್ಲಿ ನೀನು ಆಕೆಯ ಬಳಿಗೆ ಹೋಗಬೇಡ; ಮೂರ್ಛೆ ತಿಳಿದು ಸಂಪೂರ್ಣ ಸಮಾಧಾನ ಸ್ಥಿತಿಗೆ ಬರುವ ವರೆಗೂ ನೀನು ಆಕೆಗೆ ಕಾಣಿಸಿಕೊಳ್ಳದಂತೆ ಸ್ವಲ್ಪ ಮರೆಯಾಗಿರು" ಎಂದನು. ವೀರಸಿಂಗನು ವೃದ್ಧನ ಮಾತನ್ನು ಗೌರವಿಸದೆ ಹೋಗಲಿಲ್ಲ. ವೃದ್ಧನು ಆಕೆಯ ಬಳಿಗೆ ಹೋಗಿ ಸುತ್ತು ಮುತ್ತಲೂ ನೆರೆದಿದ್ದ ಜನರನ್ನು ಚದರಿಸಿ, ಆಕೆಯ ಮೇಲೆ ಗಾಳಿಯು ಚೆನ್ನಾಗಿ ಬೀಸುವಂತೆ ಮಾಡಿದನು; ತಣ್ಣೀರನ್ನು ಮುಖಕ್ಕೆ ಸ್ವಲ್ಪ ಸ್ವಲ್ಪವಾಗಿ ಎರಚುತ್ತ, ನೀರಿನಲ್ಲಿ ತೊಯ್ದ ಬಟ್ಟೆಯೊಂದನ್ನು ತಲೆಗೊತ್ತಿದನು. ಸ್ವಲ್ಪ ಹೊತ್ತಿನೊಳಗಾಗಿ ಆಕೆಗೆ ಪ್ರಜ್ಞೆ ಬಂದಿತು; ಅರ್ಧ ಗಳಿಗೆಯ ವರೆಗೆ ಸುಮ್ಮನೆ ಕುಳಿತಳು. ಈ ಸಮಯದಲ್ಲಿ ಬಾಲಕನು ಓಡಿಬಂದು, "ಅಮ್ಮಾ, ನಾನು ಬದುಕಿ ಬಂದೆನು" ಎಂದನು.

ತಾಯಿ.—ಅಪ್ಪಾ, ಬಂದೆಯಾ! ಬಾ, ನನ್ನ ಚಿನ್ನವೇ! ನನ್ನ ಮುದ್ದು ಮಗುವೇ! ನಿನ್ನನ್ನು ಯಾರು ಬದುಕಿಸಿ ಕರೆತಂದರಪ್ಪಾ? ಆ ಮಹಾನುಭಾವನು ಯಾರು?

ವೀರಸಿಂಗ.—(ಸಮೀಪದಲ್ಲಿರುವ ವೃದ್ಧನನ್ನು ತೋರಿಸಿ) ಇಗೋ, ಇಗೋ! ಈ ಮಹಾರಾಯನು.

ತಾಯಿ.—(ಕೂಡಲೆ ಎದ್ದು ಬಂದು, ಸಂತೋಷವೂ ವ್ಯಸನವೂ ಕೂಡಿದ ಧ್ವನಿಯಿಂದ, ಕಣ್ಣೀರು ಸುರಿಸುತ್ತ) ಅಪ್ಪಾ! ಪುಣ್ಯಾತ್ಮನೇ! ತಂದೆಯೇ! ಈ ಪಾಪಿಯಾದ ನಾನು, ನೀನು ಮಾಡಿದ ಮಹೋಪಕಾರಕ್ಕಾಗಿ ಏನು ಕೊಡಲಿ? ಏನು ಪ್ರತ್ಯುಪಕಾರ ಮಾಡಲಿ? ನಾನೇನು ಕೊಡ ಬಲ್ಲೆ? ಹೇ ದಯಾ ನಿಧೇ! ಹೇ ಪರಮಾತ್ಮಾ! ಈ ವೃದ್ಧ ಗೃಹಸ್ಥನಿಗೆ ದೀರ್ಘಾಯುಸ್ಸನ್ನೂ ಸಕಲ ಸಂಪತ್ತನ್ನೂ ದಯಪಾಲಿಸು. ಕಂದಾ! ತಾತನಿಗೆ ಮತ್ತೊಮ್ಮೆ ನಮಸ್ಕರಿಸು.

ಹೀಗೆಂದು ಹೇಳಿ ತಾನೂ ಪುನಃ ಪುನಃ ಅವನಿಗೆ ನಮಸ್ಕಾರ ಮಾಡುತ್ತ ತನ್ನ ಕಣ್ಣೀರಿನಿಂದ ಅವನ ಪಾದಗಳನ್ನು ತೊಳೆಯುತ್ತ, ತಾನು ಯಾರು? ಏನು ಮಾಡುತ್ತಿದ್ದೇನೆ? ಹೀಗೆ ಮಾಡಬಹುದೆ?— ಇವೇ ಮುಂತಾದುವನ್ನಾಲೋಚಿಸದೆ ತನ್ನ ಅಂತರಾತ್ಮ ಶುದ್ಧಿಯಿಂದ, ಅವನು ಯಾರೇ ಆಗಿರಲಿ! ಆಪತ್ಕಾಲದಲ್ಲಿ ಪ್ರಾಣ ದಾನ ಮಾಡಿದವನು ಸಾಕ್ಷಾತ್ ಭಗವದಂಶ ಸಂಭೂತನೆಂಬ ತಾತ್ವಿಕವಿಚಾರವನ್ನೇ ಪ್ರಾಧಾನ್ಯ ವಾಗಿಟ್ಟುಕೊಂಡು ನಿಶ್ಚಲ ಚಿತ್ತಳಾಗಿ, ಯಾರು ಹೇಗಾದರೂ ಹೇಳಿ ಕೊಳ್ಳಲಿ, ಅದರಿಂದ ತನಗೇನೂ ಬಾಧಕವಿಲ್ಲವೆಂಬ ಉದಾತ್ತ ಭಾವದಿಂದ ಆ ವೃದ್ಧನನ್ನು ನೋಡುತ್ತಿದ್ದಳು.

ಅಷ್ಟಕ್ಕೇ ಸುಮ್ಮನಾಗಲಿಲ್ಲ; ಆಕೆಯು ಪುನಃ, "ಸ್ವಾಮಿ, ದರಿದ್ರಳಾದ ನಾನು ತಮ್ಮಿಂದ ಮಹೋಪಕಾರವನ್ನು ಹೊಂದಿದೆನು. ಇದಕ್ಕೆ ನಾನು ಇನ್ನೆಷ್ಟು ಜನ್ಮವೆತ್ತಿ ಪ್ರತ್ಯುಪಕಾರ ಮಾಡಿದರೂ ಅದು ಅತ್ಯಲ್ಪವಾಗಿರುವುದು" ಎಂದು ಬಿಕ್ಕಿ ಬಿಕ್ಕಿ ಅಳುತ್ತ ಮತ್ತೆ ನಮಸ್ಕರಿಸಿ ದಳು. ಅವಳನ್ನು ನೋಡಿ ವೃದ್ಧನಿಗೂ ವ್ಯಥೆಯುಂಟಾಗಿ, ಕಣ್ಣೀರು ತಾನಾಗಿಯೇ ಧಾರೆಯಾಗಿ ಪ್ರವಹಿಸಿತು. ಆತನು ಕಣ್ಣೀರೊರಸಿ ಕೊಂಡು, "ಅಮ್ಮಾ ಮಗಳೇ! ದುಃಖಿಸಬೇಡ; ನನಗಾಗಲಿ, ಯಾರಿಗೇ ಆಗಲಿ, ಇತರ ಯಾವ ಪ್ರಾಣಿಗೇ ಆಗಲಿ ಸಹಾಯ ಮಾಡತಕ್ಕವನು

ಆ ಭಗವಂತನಲ್ಲದೆ ಬೇರೆ ಇಲ್ಲ. ನಿನ್ನಿಂದ ನಾನು ಯಾವ ಪ್ರತಿ ಫಲವನ್ನೂ ಅಪೇಕ್ಷಿಸೆನು. ನಾನು ನನ್ನ ಕರ್ತವ್ಯವನ್ನು ಮಾಡಿರುವೆನಲ್ಲದೆ ಬೇರೆ ಇಲ್ಲ. ಪ್ರತಿಯೊಬ್ಬನೂ ತನ್ನ ಕೈಯಲ್ಲಾದ ಮಟ್ಟಿಗೂ ಪರೋಪಕಾರ ಮಾಡತಕ್ಕದ್ದು ಅವನ ಕರ್ತವ್ಯವು. ಯಾರು ಹಾಗೆ ಮಾಡುವುದಿಲ್ಲವೋ ಅವರ ಜನ್ಮವು ತುಚ್ಛವಾದುದು. ಕ್ರಿಮಿ ಕೀಟಗಳು ಸಹ ತಮ್ಮ ಜೀವ ಮಾನವನ್ನು ಪರೋಪಕಾರದಲ್ಲಿಯೇ ಕಳೆಯುತ್ತಿರುವುವು. ತರು ಲತಾದಿ ಸಸ್ಯ ವರ್ಗವು ಕೂಡ ಪರೋಪಕಾರಕ್ಕಾಗಿಯೇ ಜನ್ಮವೆತ್ತಿರುವಂತೆ ತೋರುವುದು. ಇದನ್ನೆಲ್ಲ ತಿಳಿದು, ಅವುಗಳಿಗಿಂತಲೂ ಅತಿಶಯವಾದ ಜ್ಞಾನವನ್ನು ಹೊಂದಿರುವ ಮನುಜರಾದ ನಾವು ಪರೋಪಕಾರಿಗಳಾಗದೆ, ಭೂತ ದಯಾ ಪಶ್ಚಾತ್ತಾಪವಿಲ್ಲದೆ, ಪರ ಹಿಂಸಾ ಪರಾಯಣರಾಗಿ ನರ ರಾಕ್ಷಸರಂತೆ ಬಾಳಬಹುದೆ? ನಾನು ಇನ್ನು ಹೊರಡುವೆನು. ಮತ್ತೆ ಯಾವಾಗಲಾದರೂ ನಿಮ್ಮನ್ನು ನೋಡಲು ಬರುವೆನು'' ಎಂದು ಆಕೆಯ ಹೆಸರು ಮುಂತಾದುದನ್ನು ಕೇಳಿ ತಿಳಿದುಕೊಂಡು ಆ ಜನಗಳ ಗುಂಪಿನಲ್ಲಿ ನುಗ್ಗಿ ಎಲ್ಲಿಗೋ ಹೋಗಿಬಿಟ್ಟನು. ಅವನನ್ನು ಪುನಃ ಯಾರೂ ಕಾಣಲಿಲ್ಲ. ಅವನು ಯಾರು? ಎಲ್ಲಿಂದ ಬಂದನು? ಎಲ್ಲಿಗೆ ಹೋದನು? ಯಾವುದೂ ಗೊತ್ತಾಗಲಿಲ್ಲ. ಸತ್ಪುರುಷರ ಸ್ವಭಾವವೇ ಹೀಗೆ. ತಮ್ಮ ಜೀವದ ಮೇಲಿನ ಆಶೆಯನ್ನು ತೊರೆದು ಸ್ವಲ್ಪವಾದರೂ ಸ್ವಾರ್ಥತೆಯಿಲ್ಲದೆ, ಯಾವಾಗಲೂ ಪರೋಪಕಾರ ಕಾರ್ಯದಲ್ಲಿಯೇ ನಿರತರಾಗಿದ್ದು, ತಮ್ಮ ಹೆಸರು ಕೂಡ ಇತರರಿಗೆ ತಿಳಿಯಬಾರದೆಂದೆಣಿಸಿ ಜನರ ಕಣ್ಣುಗಳಿಗೂ ಹೆಚ್ಚಾಗಿ ಬೀಳದೆ, ತಮ್ಮ ಕರ್ತವ್ಯವನ್ನು ಪರಿಪಾಲಿಸುತ್ತಿರುವ ಇಂತಹ ಮಹಾತ್ಮರಿಂದಲೇ ಅಲ್ಲವೆ ದೇಶೋದ್ಧಾರವಾಗುವುದು!

ಬೆಂಕಿ ಬಿದ್ದ ಆ ಮನೆಯು ಸಂಪೂರ್ಣವಾಗಿ ಅಗ್ನಿಯ ಸ್ವಾಧೀನವೇ ಆಗಿಹೋಯಿತು. ಅಗ್ನಿಯು ತೃಪ್ತಿ ಹೊಂದಿ ನಾಲಗೆಗಳನ್ನು ಚಾಚದೆ ಕಣ್ಣುಗಳನ್ನು ಮಾತ್ರ ತೆರೆದು ವಿಶ್ರಾಂತಿ ಹೊಂದಿದನು. ಅಲ್ಲಿ ನೆರೆದಿದ್ದ ಜನರ ಗುಂಪು ಕ್ರಮೇಣ ಕಡಿಮೆಯಾಯಿತು.

ಹಿಂದೆ ಹೇಳಿದ ವೃದ್ಧ ಮಹಾಶಯನು ಅಲ್ಲಿಂದ ಹೊರಟು ಎಲ್ಲಿಯೂ ನಿಲ್ಲದೆ, ಪಟ್ಟಣದ ಪುರೋಭಾಗದಲ್ಲಿ ಪ್ರವಹಿಸುತ್ತಿದ್ದ ಯಮುನಾ ನದಿಯ

ಕಡೆಗೆ ಬಂದನು. ದಾರಿಯಲ್ಲಿ, ತನ್ನಲ್ಲಿ ತಾನೆ, "ಏನು! ಬಹಳ ಹೊತ್ತಾಗಿಲ್ಲವಷ್ಟೆ? ನಾನು ಸುಳ್ಳು ಹೇಳಿದೆನೆಂದು ಅವನು ತಿಳಿದುಕೊಳ್ಳಲಾರನಲ್ಲವೆ?" ಎಂದು ಮುಂತಾಗಿ ಹೇಳಿಕೊಳ್ಳುತ್ತಿದ್ದನು. ನದಿಯ ಬಳಿಗೆ ಬಂದು ವೃದ್ಧನು ಅದನ್ನು ನಮಸ್ಕರಿಸಿ, ಸಮೀಪದಲ್ಲಿಯೇ ಇದ್ದ ಸಾಧಾರಣವಾದೊಂದು ಮೆಟ್ಟಿಲ ಮೇಲಿಳಿದು ತನ್ನ ಮೈಗೆ ಹತ್ತಿಕೊಂಡಿದ್ದ ಕೆಸರನ್ನೆಲ್ಲ ಚೆನ್ನಾಗಿ ತೊಳೆದುಕೊಂಡು ಬೇರೆ ಉಡುಪನ್ನು ಹಾಕಿಕೊಂಡನು. ನದಿಯ ತೀರದಲ್ಲಿ ಬೆಳುದಿಂಗಳು ತಕ್ಕ ಮಟ್ಟಿಗೆ ಪ್ರಶಸ್ತವಾಗಿಯೇ ಇದ್ದಿತು. ಸಾವಿರಾರು ನಕ್ಷತ್ರಗಳು ಥಳ ಥಳನೆ ಮಿನುಗುತ್ತಿದ್ದುವು. ಚಂದ್ರ ನಕ್ಷತ್ರಗಳ ಪ್ರತಿಬಿಂಬಗಳು ಯಮುನಾ ನದಿಯ ನೀರಿನಲ್ಲಿ ಕ್ರೀಡಿಸುತ್ತಿದ್ದುವು. ಮಾರುತನು ಮಂದ ಗಮನದಿಂದ ಸಂಚರಿಸುತ್ತಿದ್ದನು. ನಮ್ಮ ವೃದ್ಧ ಸರದಾರನು ತನ್ನ ಕೆಲಸವನ್ನು ತೀರಿಸಿಕೊಂಡು ಸೋಪಾನವನ್ನು ಹತ್ತಿ ಮೇಲಕ್ಕೆ ಬಂದು ಸುತ್ತಲೂ ದೃಷ್ಟಿಸಿ ನೋಡಿದನು. ಶಾಂತಿ ಸಾಮ್ರಾಜ್ಯವು ಎಲ್ಲೆಲ್ಲಿಯೂ ಪರಿಪೂರ್ಣವಾಗಿದ್ದಿತು. ನದೀ ತೀರದ ಮತ್ತೊಂದು ಕಡೆಯಿಂದ ಕರಿಯ ಉಡುಪನ್ನು ತೊಟ್ಟ ಪುರುಷನೊಬ್ಬನು ಬರುತ್ತಿರುವಂತೆ ತೋರಿತು. ವೃದ್ಧನು ಸಮಾಧಾನದಿಂದ ಆ ಕಡೆಗೆ ನೋಡುತ್ತ ನಿಂತುಕೊಂಡನು. ಸ್ವಲ್ಪ ಹೊತ್ತಿಗೆ ಆ ವ್ಯಕ್ತಿಯು ಇವನ ಹತ್ತಿರದಲ್ಲಿಯೇ ಬಂದು ನಿಂತಿತು; ಏನೂ ಮಾತನಾಡಲಿಲ್ಲ. ವೃದ್ಧನು ತಾನು ಸರಿಯಾದ ಹೊತ್ತಿಗೇ ಅಲ್ಲಿಗೆ ಬಂದೆನೆಂದುಕೊಂಡು, "ಅಯ್ಯಾ, ನಾನು ಹಿಂದೆ ನಿನಗೆ ವಚನವನ್ನಿತ್ತಂತೆ ಇಗೋ ಬಂದಿರುವೆನು; ನೀನು ಏನೇನು ಆಲೋಚಿಸಿದೆ? ಏನು ಸಿದ್ಧಾಂತ ಮಾಡಿರುವೆ?" ಎಂದು ಕೇಳಿದನು. ಆ ಕೃಷ್ಣ ವಸ್ತ್ರಧಾರಿಯು ಕೂಡಲೆ ತನ್ನ ವೇಷವನ್ನೆಲ್ಲ ತೆಗೆದುಹಾಕಿ ತನ್ನ ಕೈಯಲ್ಲಿದ್ದ ಕಠಾರಿಯನ್ನು ವೃದ್ಧನ ಪಾದಗಳ ಮೇಲಿರಿಸಿ, "ಮಹಾಪ್ರಭೋ! ನನ್ನ ಅಪರಾಧಗಳನ್ನೆಲ್ಲ ಮನ್ನಿಸಬೇಕು" ಎಂದು ಹೇಳುತ್ತ ಅಡ್ಡಬಿದ್ದು ನಿಂತುಕೊಂಡನು.

ಇವರಿಬ್ಬರೂ ಯಾರೆಂಬುದು ವಾಚಕರಿಗೆ ಗೊತ್ತಾಗಿರಬಹುದು: ಹಿಂದೆ ಒಂದು ದಿನ ರಾತ್ರಿ ಸತ್ರದಲ್ಲಿ ವೃದ್ಧನನ್ನು ಕೊಲ್ಲಬೇಕೆಂದು ವೇಷಾಂತರದಿಂದ ಬಂದಿದ್ದ ಸೈತಾನ ಸಿಂಗನೊಬ್ಬನು; ಅಲ್ಲಿದ್ದ ವೃದ್ಧನೇ

ಮತ್ತೊಬ್ಬನು. ವೃದ್ಧನಂತೆ ಕಾಣುತ್ತ ವೇಷಧಾರಿಯಾಗಿದ್ದವನೇ ಧೀರನಾದ ಬಾಬರಷಹಾ.

## ಐದನೆಯ ಪರಿಚ್ಛೇದ

ಹಿಂದೆ ಹೇಳಿದಂತೆ ಬಾಬರನು ತನ್ನ ಎದುರಿನಲ್ಲಿ ಸ್ತಂಭೀಭೂತನಾಗಿ ನಿಂತಿದ್ದ ಯುವಕನನ್ನು ಸೂಕ್ಷ್ಮ ದೃಷ್ಟಿಯಿಂದ ಆಪಾದ ಮಸ್ತಕವೂ ನೋಡುತ್ತ ನಿಂತುಕೊಂಡನು. ಯುವಕನ ವಯಸ್ಸು ಸುಮಾರು ಇಪ್ಪತ್ತೆಂಟು ವರ್ಷವಿರಬಹುದು; ದೃಢವಾದ ಶರೀರ, ಪ್ರಕಾಶಮಾನವಾದ ಕಣ್ಣುಗಳು, ಸುಂದರವಾದ ಮುಖ, ಕಳಂಕವಿಲ್ಲದ ವಿಶಾಲವಾದ ಹಣೆ, ಉದಾರವಾದ ಮನಸ್ಸಿನ ಕಳೆ—ಇವೆಲ್ಲವೂ ಆಗಿನ ಮಸಕಾದ ಬೆಳುದಿಂಗಳಲ್ಲಿಯೂ ಬಾಬರನಿಗೆ ಸ್ಪಷ್ಟವಾಗಿ ಕಾಣುತ್ತಿದ್ದಿತು. ಇದನ್ನು ನೋಡಿ ಬಾಬರನಿಗೆ ಅತ್ಯಾಶ್ಚರ್ಯವಾಯಿತು. ಆತನು, "ಇದೇನು ಆಶ್ಚರ್ಯ! ಇಂತಹ ನಿಷ್ಕಲ್ಮಷವಾದ ಆಕಾರವನ್ನೂ ನಿರ್ದುಷ್ಟವಾದ ಹೃದಯವನ್ನೂ ಹೊಂದಿದ ಮನುಷ್ಯನು ನಿರಪರಾಧಿಯಾದವನನ್ನು ಅನ್ಯಾಯವಾಗಿ ಕೊಲ್ಲುವುದೆಂದರೇನು? ಕೊಲೆಪಾತಕದಂತಹ ನೀಚ ಕೃತ್ಯವು ನೀಚ ಕುಲದಲ್ಲಿ ಹುಟ್ಟಿದ ಅತಿ ನೀಚರಿಂದಲೇ ನಡೆಯಬೇಕಲ್ಲದೆ ಇಂತಹ ಸತ್ಕುಲೋದ್ಭವನಿಂದ ಎಂದೆಂದಿಗೂ ಆಗಲಾರದಲ್ಲವೆ!" ಎಂದು ಯುವಕನನ್ನು ಕುರಿತು, "ಅಯ್ಯಾ, ಈಗಲಾದರೂ ನಿಜವನ್ನು ಹೇಳು; ನನ್ನ ಮನಶ್ಶಾಂತಿಗಾಗಿ ಕೇಳುವೆನಲ್ಲದೆ ಮತ್ತೇತಕ್ಕೂ ಅಲ್ಲ; ಬೇಸರಪಡಬೇಡ" ಹೀಗೆಂದು ಹೇಳಿ, ಸ್ವಲ್ಪ ಮುಂದಕ್ಕೆ ಬಂದು, ಯುವಕನ ಬಲಗೈಯನ್ನು ಹಿಡಿದು, "ನಿರ್ಭಯವಾಗಿ ಹೇಳು" ಎಂದನು.

ಯುವಕ.—ಶಹಾನಶಹಾ! ತಾವು ಈ ರೀತಿಯಾಗಿ ಈ ವೇಳೆಯಲ್ಲಿ ನನ್ನನ್ನು ತೊಂದರೆಗೊಳಿಸುವುದೇಕೆ? ನನಗೆ ಮತ್ತಷ್ಟು ನಾಚಿಕೆಯನ್ನುಂಟುಮಾಡುತ್ತಿರುವಿರಲ್ಲವೆ?

ಬಾಬರ.—(ಸ್ವಲ್ಪ ಹಿಂದಕ್ಕೆ ಸರಿದು, ಕೈಯನ್ನು ಬಿಟ್ಟು ಪುನಃ ದೃಷ್ಟಿಸಿ ನೋಡುತ್ತ) ಮತ್ತೇನು? ಈಗಲೂ ನೀನು ನನ್ನನ್ನು ನಿಶ್ಚಯವಾಗಿಯೂ ಕೊಲ್ಲಬೇಕೆಂದಿರುವೆಯೊ?

ಯುವಕ.—ಇದಕ್ಕೆ ಸ್ವಲ್ಪ ಮುಂಚಿತವಾಗಿ ಹಾಗೆಯೇ ಆಲೋಚಿಸಿದ್ದೆನು; ಆದರೆ ಈಗ ಆ ಬುದ್ಧಿಯು ಮಾರ್ಪಟ್ಟುಹೋಯಿತು.

ಬಾಬರ.—ಆದರೆ ನಿನಗೆ ಗಳಿಗೆ ಗಳಿಗೆಗೂ ಮನಸ್ಸು ಮಾರ್ಪಡುತ್ತಿರುವುದಕ್ಕೆ ಕಾರಣವೇನು ?

ಯುವಕ.—(ನಿರುತ್ತರ.)

ಬಾಬರ.—ಹಾಗಾದರೆ ದ್ವಂದ್ವ ಯುದ್ಧವನ್ನೇ ಅಪೇಕ್ಷಿಸುತ್ತೀಯೊ ?

ಯುವಕ.—ಬೇಡ ! ಬೇಡ !!

ಬಾಬರ.—(ಸ್ವಲ್ಪ ಯೋಚಿಸಿ) ನಿನಗೆ ಬುದ್ಧಿ ಸರಿಯಾಗಿಲ್ಲವೆಂದು ತೋರುತ್ತದೆ. ಆಗಲಿ; ಈಗಲ್ಲದಿದ್ದರೆ ಇನ್ನು ಯಾವಾಗಲಾದರೂ ಹೇಳುವೆಯಂತೆ; ನಿನ್ನ ಮನಸ್ಸು ಸ್ಥಿರವಾದಾಗ ನಾನು ಪುನಃ ಕೇಳಿ ತಿಳಿದುಕೊಳ್ಳುವೆನು. ಆಗ ನಿಸ್ಸಂಶಯವಾಗಿ ನೀನು ಹೇಳಲೇ ಬೇಕು. ನಿನ್ನ ಹೆಸರೇನು?

ಯುವಕ.—ನನ್ನ ಹೆಸರು ಆನಂದಸಿಂಹ. ಆದರೆ....ಈ ನೀಚ ವೃತ್ತಿಯನ್ನು......

ಬಾಬರ.—(ನಡುವೆ ಅಡ್ಡಬಂದು) ಯಾವುದು ? ಯಾವ ನೀಚ ವೃತ್ತಿ ? ನನ್ನನ್ನು ಕೊಲ್ಲುವುದೆ?

ಯುವಕ.—ನಿಜ ; ಈ ನೀಚ ವೃತ್ತಿಯ ಸಾಧನೆಗಾಗಿ ಸೈತಾನ ಸಿಂಗನೆಂಬ ಕೃತ್ರಿಮವಾದ ಹೆಸರನ್ನಿಟ್ಟುಕೊಂಡಿದ್ದೆನು.

ಬಾಬರ.—(ಗಹಗಹಿಸಿ ನಗುತ್ತ) ವಹವ್ವಾ! ವಹವ್ವಾ! ಏನು ಚಮತ್ಕಾರ ! ಭಗವಂತನು ನಿನಗೆ ಈ ಸುಸ್ವರೂಪವನ್ನು ಕೊಟ್ಟಿರುವನು ; ನಿನ್ನ ತಾಯಿ ತಂದೆಗಳೂ ಅದಕ್ಕೆ ತಕ್ಕಂತೆಯೇ ಆನಂದಸಿಂಹನೆಂಬ ಅನ್ವರ್ಥನಾಮವನ್ನೇ ಇಟ್ಟಿರುವರು. ನಿನ್ನನ್ನು ನೋಡಿದ ಮಾತ್ರದಿಂದಲೇ ಎಲ್ಲರಿಗೂ ಆನಂದವುಂಟಾಗುವುದು. ನಿನ್ನ ಮುಖದಲ್ಲಿ ಆನಂದವೂ ಸರಳತನವೂ ಉದಾರಬುದ್ಧಿಯೂ ಮೂರ್ತಿಮತ್ತಾಗಿ ಕಾಣುತ್ತಿವೆ. ಆದರೆ, ನಿನ್ನ ಕೈಗಳು ಮಾತ್ರ ಈ ನೀಚ ಕೃತ್ಯಕ್ಕೆ ಅತ್ಯಾತುರ ಪಡುತ್ತಿದ್ದುವು. ನಿನ್ನ ಹೃದಯವು ಅವಕ್ಕೆ ಪೂರ್ಣಾಧಿಕಾರವನ್ನು ಮಾತ್ರ ಕೊಡಲಿಲ್ಲ. ಆಶ್ಚರ್ಯ! ಆದುದು ಆಗಿಹೋಯಿತು. ಇನ್ನು

ಮುಂದೆ ನಾವಿಬ್ಬರೂ ಸ್ನೇಹಿತರಾಗಿರೋಣ. ಈಗ ರಾತ್ರಿ ಬಹಳ ಹೊತ್ತಾಗಿದೆ. ಮಿತ್ರನೇ! ನನ್ನೊಡನೆ ಬಾ; ಮನೆಗೆ ಹೋಗಿ ಮಲಗಿಕೊಳ್ಳೋಣ. ಅನುಕೂಲವಾದಾಗ ಎಲ್ಲ ವಿಷಯಗಳನ್ನೂ ಕೇಳಿ ತಿಳಿದುಕೊಳ್ಳುವೆನು.

ಹೀಗೆಂದು ಹೇಳಿ ಬಾಬರನು ಅವನ ಕೈಹಿಡಿದುಕೊಂಡು ಹೊರಟನು. ಸ್ವಲ್ಪ ಹೊತ್ತಿನಲ್ಲಿ ಅವರಿಬ್ಬರೂ ಅರಮನೆಯನ್ನು ಸೇರಿದರು. ದಾರಿಯಲ್ಲಿ ಅವರಿಗೆ ಹೆಚ್ಚು ಮಾತುಗಳೇನೂ ನಡೆಯಲಿಲ್ಲ. ಅರಮನೆಯನ್ನು ಸೇರುವುದಕ್ಕೆ ಮೊದಲೇ ಬಾಬರನು ತನ್ನ ಕೃತ್ರಿಮ ವೇಷವನ್ನು ತೆಗೆದುಹಾಕಿದನು. ಆಗ ಆನಂದಸಿಂಹನು ಬಾಬರನ ಅಂಗಾಂಗಗಳೆಲ್ಲವನ್ನೂ ದಿಟ್ಟಿಸಿ ನೋಡಿ ಪರೀಕ್ಷಿಸಿದನು. ಬಾಬರನಿಗೆ ಸುಮಾರು ಐವತ್ತು ವರ್ಷ ವಯಸ್ಸಿರಬಹುದು. ಆದರೂ ಅವನ ಪುಷ್ಟವಾದ ಶರೀರದಲ್ಲಿ ವೃದ್ಧಾಪ್ಯದ ಯಾವ ಕುರುಹೂ ಕಂಡುಬರುತ್ತಿರಲಿಲ್ಲ. ಮುಖಮುದ್ರೆಯು ಶಾಂತವಾಗಿಯೂ ಗಂಭೀರವಾಗಿಯೂ ನೋಡುವುದಕ್ಕೆ ಸುಂದರವಾಗಿಯೂ ಇದ್ದಿತು. ಮೂಗು ಸರಳವಾಗಿಯೂ ಕಣ್ಣುಗಳು ಸ್ವಲ್ಪ ಚಿಕ್ಕವಾಗಿಯೂ, ಆದರೂ ತೇಜಃಪುಂಜವಾಗಿಯೂ ಚಿತ್ತಾಕರ್ಷಕವಾಗಿಯೂ ಇದ್ದುವು. ಅರಮನೆಯೊಳಗೆ ಪ್ರವೇಶಿಸಿದ ಮೇಲೆ ಬಾಬರನು ಸೇವಕನೊಬ್ಬನನ್ನು ಕರೆದು, ಫಲಾಹಾರದ ಸಾಮಗ್ರಿಗಳನ್ನು ತರುವಂತೆ ಅಪ್ಪಣೆಮಾಡಿದನು. ಸೇವಕನು ಕೂಡಲೆ ಎರಡು ಚಿನ್ನದ ತಟ್ಟೆಗಳಲ್ಲಿ ನಾನಾ ವಿಧವಾದ ಹಣ್ಣು ಹಂಪಲುಗಳನ್ನೂ, ಎರಡು ಚಿನ್ನದ ಪಾತ್ರೆಗಳಲ್ಲಿ ಕಾಯಿಸಿದ ಹಾಲನ್ನೂ ತಂದಿಟ್ಟನು. ಆಗಿನ ಕಾಲದಲ್ಲಿ ಹಸಿವನ್ನು ತೀರಿಸುವುದಕ್ಕಾಗಲಿ, ದಣಿವನ್ನು ಆರಿಸುವುದಕ್ಕಾಗಲಿ, ಈಗಿನ ನಮ್ಮ ನವನಾಗರಿಕ ಪದ್ಧತಿಯಂತೆ, ಕಾಫಿ, ಚಹಾ, ಕೋಕೋ, ಸೋಡಾ ವಾಟರ್ ಮುಂತಾದ ಪಾನೀಯಗಳು ಇರಲೇ ಇಲ್ಲ; ಇವುಗಳ ಚಿತ್ರವಿಚಿತ್ರವಾದ ಹೆಸರುಗಳೂ ತಿಳಿದಿರಲಿಲ್ಲ. ಈಚೆಗೆ ನಾವು ಸುಧಾರಣೆಗೊಳಪಟ್ಟು ನಾಗರಿಕರಾಗಿ, ಹೇಗೆ ಹೇಗೆ ಇವುಗಳ ಸೇವನಾಸಕ್ತರಾದೆವೋ ಹಾಗೆ ಹಾಗೆ ಭಾರತಮಾತೆಯ ಐಶ್ವರ್ಯವನ್ನೂ ಭಾರತಮಾತೆಯ ಪುತ್ರರ ದೇಹದಾರ್ಢ್ಯ, ಸ್ಥಿರಚಿತ್ತ, ಶ್ರಮಸಹಿಷ್ಣುತೆ ಮುಂತಾದ ಸದ್ಗುಣಗಳನ್ನೂ ಹಾಳುಮಾಡಿಕೊಳ್ಳುತ್ತ, ನಾವೇ ಬಹ

ಬುದ್ಧಿಶಾಲಿಗಳೆಂದೂ ನಮ್ಮ ಪೂರ್ವಜರು ಅನಾಗರಿಕರೆಂದೂ ಹೆಮ್ಮೆಯನ್ನು ಕೊಚ್ಚಿಕೊಳ್ಳುತ್ತಿರುವೆವು; "ಕಾಲಾಯ ತಸ್ಮೈನಮಃ."

ಸಪ್ರೇಮ ವದನನಾದ ಬಾಬರನು ಅಲ್ಲಿದ್ದ ಫಲಾದಿಗಳನ್ನು ತನ್ನ ಕೈಯಿಂದ ತೆಗೆದು ಆನಂದಸಿಂಹನಿಗೆ ಕೊಡುತ್ತ, "ಅಯ್ಯಾ! ಸಂಕೋಚಪಟ್ಟುಕೊಳ್ಳಬೇಡ, ತೆಗೆದುಕೊ; ಇದು ನಮ್ಮಿಬ್ಬರ ಪ್ರಾಥಮಿಕ ಸ್ನೇಹಾರಂಭದ ಹೆಗ್ಗುರುತು. ಈ ಅಮೃತ ಸಾಕ್ಷಿಯಾಗಿ ನಾವಿಬ್ಬರೂ ಇನ್ನುಮುಂದೆ ಪರಮ ಸ್ನೇಹಿತರಾಗಿರೋಣ" ಎಂದನು. ಆನಂದಸಿಂಹನು ಯಾವ ಭೇದ ಭಾವವನ್ನೂ ಎತ್ತೆಣಿಸದೆ ಹಣ್ಣನ್ನು ಆತ್ಮಾದರದಿಂದ ಸ್ವೀಕರಿಸಿ ಹಾಲನ್ನು ಕುಡಿದನು. ಇಬ್ಬರ ಫಲಾಹಾರವೂ ಮುಗಿಯಿತು. ಅಷ್ಟರಲ್ಲಿ ಸೇವಕರು ಹಾಸಿಗೆಯನ್ನು ಸಿದ್ಧಪಡಿಸಿದರು. ಇಬ್ಬರೂ ತಮ ತಮಗೆ ಗೊತ್ತಾಗಿದ್ದ ಹಾಸಿಗೆಗಳ ಮೇಲೆ ಮಲಗಿ ನಿದ್ರಾ ಪರವಶರಾದರು.

ಉಷಃಕಾಲವು ಸಮಿಾಪಿಸಿತು. ಆನಂದಸಿಂಹನು ತನ್ನ ಹಾಸಿಗೆಯ ಮೇಲೆದ್ದು ಕುಳಿತು, ಕಿಟಕಿಯೊಳಗಿನಿಂದ ಪೂರ್ವ ದಿಕ್ಕಿನ ಶೋಭಾ ಕಾಂತಿಯನ್ನು ನೋಡುತ್ತ, ಅಲ್ಲಿ ಕ್ಷಣಕ್ಷಣಕ್ಕೆ ವಿಧ ವಿಧವಾಗಿ ತೋರಿಬರುತ್ತಿರುವ ನಾನಾ ವರ್ಣಗಳನ್ನು ನೋಡಿ ಆನಂದಪಡುತ್ತಿದ್ದನು. ಸೂರ್ಯನು ಹುಟ್ಟುವ ಸಮಯ; ಆ ಸಮಯದಲ್ಲಿ ಆನಂದಸಿಂಹನು ಮಲಗಿದ್ದ ಕೋಣೆಯ ಬಾಗಿಲು ತೆರೆಯಿತು. ಬಾಬರನು ತನ್ನೊಡನೆ ಐದು ವರ್ಷ ವಯಸ್ಸಿನ ಒಬ್ಬ ಸುಂದರಳಾದ ಹುಡುಗಿಯನ್ನು ಕರೆದುಕೊಂಡು ಹಸನ್ಮುಖನಾಗಿ ಒಳಗೆ ಪ್ರವೇಶಿಸಿದನು.

ಆನಂದಸಿಂಹ.—(ಹುಡುಗಿಯನ್ನು ನೋಡಿ) ಓಹೋ! ನಾನು ಸತ್ರದಲ್ಲಿ ಆ ದಿನ ನೋಡಿದ ಹುಡುಗಿ! ಎಂಟು ಹತ್ತು ದಿವಸಗಳಲ್ಲಿಯೇ ಎಷ್ಟು ಮಾರ್ಪಾಡು!....

ಬಾಬರ.—(ಮುಗುಳ್ನಗೆಯೊಡನೆ) ನಿನಗೆ ಈ ಹುಡುಗಿಯ ಗುರುತು ಸಿಕ್ಕಿತೋ? ಬಹಳ ತುಂಟ ಹುಡುಗಿ; ಇವಳ ಚೇಷ್ಟೆಯನ್ನು ತಡೆಯುವುದುಸ್ಸಾಧ್ಯ.

ಈ ಮಾತನ್ನು ಕೇಳಿದ ಕೂಡಲೆ ಹುಡುಗಿಯು, "ಆ? ಏನೆಂದೆ? ನಾನು ತುಂಟ ಹುಡುಗಿಯೇ! ಇನ್ನೊಂದು ಸಾರಿ ಹೀಗೆ ಹೇಳಿದರೆ ನಮ್ಮ ಅಜ್ಜಿಯ ಮುಂದೆ ಹೇಳಿಬಿಟ್ಟೇನು" ಎಂದಳು. ಬಾಬರನು, "ನಿಮ್ಮ ಅಜ್ಜಿಯ ಮುಂದೆ ಹೇಳಿದರೇನಾಗುವುದು? ಅಜ್ಜಿ ಏನು ಮಾಡುವಳು?" ಎನ್ನಲು, ಹುಡುಗಿಯು, "ಹಾ! ಹಾ! ನಮ್ಮ ಅಜ್ಜಿಯೇ? ಏನು ಮಾಡ್ತ್ಯಾಳೇ?" ಎಂದು ತನ್ನ ಮುದ್ದಾದ ಪುಟ್ಟ ಮುಷ್ಟಿಯನ್ನು ಹಿಡಿದು ತೋರಿಸುತ್ತ, "ಇಗೋ! ಇಗೋ! ಹೀಗೆ ಎರಡು ಪೆಟ್ಟು ಕೊಡುವಳು" ಎಂದು ಅನುಕರಿಸಿ ತೋರಿಸಿದಳು.

ಈ ವೇಳೆಗೆ ಸುಮಾರು ಹದಿನೈದು ವರ್ಷ ವಯಸ್ಸಿನ ಒಬ್ಬ ತರುಣನು ಅಲ್ಲಿಗೆ ಬಂದು, "ಎಲೇ ಪೋರೀ! ಯಾರು? ಯಾರಿಗೆ ಏಟು ಕೊಡುವಳು? ನಿಮ್ಮ ಅಜ್ಜಿಯೊ?" ಎಂದನು.

ಹುಡುಗಿ.—ಇನ್ಯಾರಿಗೆ? ಈ ಬಾಶ್ಯಾನಿಗೆ.

ಬಾಬರ.—(ತರುಣನನ್ನು ಕುರಿತು) ಹುಮಾಯೂನ! ಇಲ್ಲಿ ನೋಡು! ಆ ದಿವಸ ನಾನು ಹೇಳಿದ ಮನುಷ್ಯನೇ ಈತನು. ನನ್ನ ಆಪ್ತಮಿತ್ರ!

ಹುಮಾಯೂನ್.—ಓಹೊ! ಬಹಳ ಸಂತೋಷ! (ಆನಂದಸಿಂಹನ ಕಡೆಗೆ ತಿರುಗಿ, ವಿನಯ ಪೂರ್ವಕವಾಗಿ ತಲೆವಾಗಿ) ಮಹಾರಾಜ, ಸಲ್ಲಾಂ!

ಬಾಬರನು ಹುಮಾಯೂನನಿಗೆ ಆನಂದಸಿಂಹನ ವಿಚಾರವನ್ನೆಲ್ಲ ಹೇಳಿ, ತನ್ನ ಮಿತ್ರನನ್ನು ಕುರಿತು, "ಮಿತ್ರವರ್ಯ! ನಿಮ್ಮ ಪ್ರಾತರ್ವಿಧಿಯನ್ನು ತೀರಿಸಿಕೊಳ್ಳಿರಿ; ಆಮೇಲೆ ಈ ದಿನ ಸೇರತಕ್ಕ ಸಭೆಗೆ ಎಲ್ಲರೂ ಹೋಗಬೇಕಾಗುವುದು" ಎಂದು ತಿಳಿಸಿ, "ಕುಮಾರ, ಇವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ, ಇವರಿಗೆ ಬೇಕಾದ ಅನುಕೂಲ್ಯಗಳನ್ನು ಒದಗಿಸಿಕೊಡು" ಎಂದು ಹುಮಾಯೂನನಿಗೆ ಹೇಳಿದನು. ಅವರಿಬ್ಬರೂ ಹೊರಟುಹೋದ ಮೇಲೆ ಬಾಬರನು ಹುಡುಗಿಯ ಸಂಗಡ ವಿನೋದ ಮಾಡುತ್ತ ಅಲ್ಲಿಯೇ ಕುಳಿತುಕೊಂಡನು.

ಸೂರ್ಯೋದಯವಾಯಿತು; ಸೂರ್ಯನ ಕಿರಣಗಳು ಎಲ್ಲೆಲ್ಲಿಯೂ ಪ್ರಸರಿಸಿ ಜಗತ್ತನ್ನು ವಿಕಾಸಗೊಳಿಸಿದುವು. ಹುಡುಗಿಯು ಅಲ್ಲಲ್ಲಿ

ಓಡಾಡುತ್ತ ಮಧ್ಯೇ ಮಧ್ಯೇ ನಗುತ್ತ ಆಟವಾಡುತ್ತಿದ್ದಳು. ಆ ಬಾಲೆಯ ಮನೋಹರವಾದ ವಿನೋದಗಳನ್ನು ನೋಡುತ್ತ ಬಾಬರನು ಮಂದಹಾಸವನ್ನು ಬೀರುತ್ತಿದ್ದನು. ಅಷ್ಟರಲ್ಲಿ ಆನಂದಸಿಂಹನೂ ಹುಮಾಯೂನನೂ ಪ್ರಾತರ್ವಿಧಿಯನ್ನು ತೀರಿಸಿಕೊಂಡು ಅಲ್ಲಿಗೆ ಬಂದರು.

'ಪ್ರಾತರ್ವಿಧಿ' ಎಂದರೆ ಈಗಳಿನ ಅರ್ಥವೇನೆಂಬುದು ಅನೇಕರಿಗೆ ಗೊತ್ತಿರಬಹುದು, ಗೊತ್ತಿಲ್ಲದೆಯೂ ಇರಬಹುದು. ಅದರ ವಿಷಯ ವಾಗಿ ಪ್ರಕೃತದಲ್ಲಿ ಸ್ವಲ್ಪ ಮಟ್ಟಿಗೆ ಹೇಳದಿರಲಾರೆವು: ಹಾಸಿಗೆಯಿಂ ದೇಳುವುದಕ್ಕೆ ಮೊದಲೇ ಕಾಫಿ, ಅಥವಾ ಚಹಾ ಸಮಾರಾಧನೆ, ಧೂಮ ಶಲಾಕ ಸೇವನೆ, ಬಹಿರ್ದೇಶ ಗಮನ, ಮುಖ ಪ್ರಕ್ಷಾಲನ, ಪುನಃ ಕಾಫಿ, ಮುಖ ಕ್ಷೌರ, ಕವಚ ಧಾರಣ, ಯಾನಾರೋಹಣ, ಆನಂದ ಭವನ ವಿಶ್ರಾಂತಿ ಗೃಹ ಆರ್ಯ ಸಮಾಜ ಇತ್ಯಾದಿ ಭವ್ಯ ಮಂದಿರ ಪ್ರವೇಶ, ಇತ್ಯಾದಿ, ಇತ್ಯಾದಿ! ಇವುಗಳೇ ಈಗಿನ ಅತಿ ಮುಖ್ಯವಾದ ಪ್ರಾತರ್ವಿಧಿಗಳು. ಇವು ಸ್ವಧರ್ಮಾಭಿಮಾನಕ್ಕೂ ಸ್ವದೇಶಾಭಿಮಾನಕ್ಕೂ ಎಷ್ಟು ಮಟ್ಟಿಗೆ ಸಹಕಾರಿಗಳೆಂಬುದನ್ನು ನಮ್ಮ ತರುಣರೇ ಊಹಿಸಲಿ. ನಮ್ಮದು ಎಂಬ ಅಭಿಮಾನವು ಇರಬೇಡವೆ!

ದರ್ಬಾರಿಗೆ ಹೊರಡುವ ವೇಳೆಯು ಸಮಿಾಪಿಸಿತು. ಬಾಬರನೂ ಹುಮಾಯೂನನೂ ಆನಂದಸಿಂಹನೂ ತಕ್ಕ ಉಡಿಗೆ ತೊಡಿಗೆಗಳನ್ನು ಧರಿಸಿ ಹೊರಡಲು ಸಿದ್ಧರಾದರು. ಇಂದಿನ ಸಭೆಯು ಬಹಳ ಮಹತ್ವ ವುಳ್ಳದ್ದಾಗಿದ್ದುದರಿಂದ, ರಾಜ ಪ್ರಾಸಾದದ ಹೊರ ಭಾಗದಲ್ಲಿಯ ಬಯ ಲಿನ ಪ್ರದೇಶದಲ್ಲಿ ನೆರೆಯುವಂತೆ ಏರ್ಪಾಡಾಗಿದ್ದಿತು. ಆಗಲೇ ಪಟ್ಟಣ ದಲ್ಲಿಯ ಆಬಾಲ ವೃದ್ಧರೆಲ್ಲರೂ ಸಭಾಸೀನರಾಗಲು ಮುಂದುವರಿಯು ತ್ತಿದ್ದರು. ಸಭೆಯಲ್ಲಿ ಬಹಳ ಗದ್ದಲ; ಅದನ್ನು ನಿಲ್ಲಿಸುವುದಕ್ಕಾಗಿ ಪ್ರಹರಿಗಳ ಆವೇಶ ಯುಕ್ತವಾದ ಉಚ್ಚ ಧ್ವನಿ; ನೆರೆದವರಲ್ಲಿ ಕೆಲವರು, ಈ ಸಭೆಯು ಸೇರಲು ಕಾರಣವೇನೆಂದೂ, ಇಷ್ಟು ದೊಡ್ಡ ಗುಂಪು ಏಕೆ ಸೇರಬೇಕೆಂದೂ ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುವ ಗುಜು ಗುಂಪಲು. ಹೀಗೆ ಜನ ಸಮ್ಮರ್ದವೂ ಶಬ್ದ ಘೋಷವೂ ಮಿತಿಮಿಾ ರಿದ್ದಿತು. ಬಾಬರನು ಬರುವ ವೇಳೆಯಾಯಿತು. ಆತನು ಗಾಂಭೀರ್ಯ

ದಿಂದಲೂ ಶಾಂತ ಮುದ್ರೆಯಿಂದಲೂ ಸಭಾ ಪ್ರವೇಶಮಾಡಿದನು. ಕೂಡಲೆ ಸಹಸ್ರ ಕಂಠಗಳಿಂದ, "ಬಾಬರ ಮಹಾಶಯನಿಗೆ ವಿಜಯ ವಾಗಲಿ!" ಎಂಬ ಕೋಲಾಹಲ ಧ್ವನಿಯು ಹೊರಟು ನಭೋಮಂಡಲ ವನ್ನಡರಿತು. ಬಾಬರನು ತನಗಾಗಿ ಸಿದ್ಧಪಡಿಸಿದ್ದ ಉಚ್ಚಾಸನದ ಮೇಲೆ ಬಂದು ಕುಳಿತನು. ಪುನಃ ಜಯಘೋಷವಾಯಿತು. ಎಲ್ಲರೂ ಭಕ್ತಿ ವಿಶ್ವಾಸಗಳಿಂದೊಡಗೂಡಿ ರಾಜ ಪದ್ಧತಿಯ ಮೇರೆಗೆ ನಜರು ಮುಜರೆ ಗಳನ್ನು ಒಪ್ಪಿಸಿದರು. ಬಾಬರನು ಹಸನ್ಮುಖದಿಂದ ಕೂಡಿ ಎಲ್ಲರ ವಂದನೆಗಳನ್ನೂ ಸ್ವೀಕರಿಸಿ, ಎಲ್ಲರೂ ಕುಳಿತುಕೊಳ್ಳುವಂತೆ ಅಪ್ಪಣೆ ಮಾಡಿದನು. ಆನಂದಸಿಂಹನೂ ಹುಮಾಯೂನನೂ ಬಾಬರನ ಎಡ ಬಲ ಪಕ್ಕಗಳಲ್ಲಿ ಕುಳಿತುಕೊಂಡರು. ಸಭೆಯ ಎಲ್ಲ ಕಡೆಯಲ್ಲಿಯೂ ಶಾಂತತೆ ಯುಂಟಾಯಿತು.

ಬಾಬರನು ಒಂದು ಸಾರಿ ಎಲ್ಲರನ್ನೂ ದೃಷ್ಟಿಸಿ ನೋಡಿ, "ಎಲೈ ಸಹೋದರ ಸಮಾನರಾದ ಪುರ ಪ್ರಮುಖರೇ! ದೇವರ ಕೃಪೆಯಿಂದ ನಾನು ನಿಮ್ಮೆಲ್ಲರ ಸೇವಕನಾಗಿ ದೇಶ ಮಾತೆಯ ಸೇವೆಯನ್ನು ಕೈಕೊಂಡು ರಾಜನೆಂಬ ನಾಮಧೇಯವನ್ನು ನಿಮ್ಮಿಂದಲೇ ಹೊಂದಿರು ವೆನು; ಆದುದರಿಂದ ತ್ರಿಕರಣ ಶುದ್ಧಿಯಿಂದಲೂ ನನ್ನ ಕರ್ತವ್ಯವನ್ನು ನಡಿಸುತ್ತ ದೇವರು ಮೆಚ್ಚುವಂತೆ ಈ ರಾಜ್ಯಭಾರವೆಂಬ ಹೊರೆಯನ್ನು ಹೊತ್ತುಕೊಂಡು ಧರ್ಮ ಮಾರ್ಗದಲ್ಲಿಯೇ ನಡೆಯುತ್ತ ಬರುವೆನೆಂದು ಶಪಥ ಪೂರ್ವಕವಾಗಿ ಹೇಳುವೆನು. ಆದರೆ ನಾನು ನಿನ್ನೆಯ ರಾತ್ರಿ ನಗರ ಶೋಧನೆಗಾಗಿ ಹೊರಟ ವೇಳೆಯಲ್ಲಿ ದುರ್ದೈವದಿಂದ ಒಂದೆರಡು ಮನೆಗಳಿಗೆ ಬೆಂಕಿ ಬಿದ್ದಿದ್ದಿತು. ಆ ಕಾಲದಲ್ಲಿ ಯಾವನೋ ಒಬ್ಬ ದುಷ್ಟನು, "ಬಾಬರನು ಡೆಲ್ಲೀ ಆಗ್ರಾ ಪಟ್ಟಣಗಳನ್ನು ಸುಟ್ಟು ಬೂದಿ ಮಾಡಲು ಬಂದಿದ್ದಾನೆ; ಅವನ ಅಪ್ಪಣೆಯಂತೆ ರಾಜ ದೂತರೇ ಬೆಂಕಿ ಯನ್ನು ಹೊತ್ತಿಸಿರಬಹುದು" ಎಂಬ ಕರ್ಣ ಕಠೋರವಾದ ವಾಕ್ಯವ ನ್ನಾಡಿದನು. ಆದರೆ, ಪ್ರಿಯ ಸಹೋದರರೇ! ಕೇಳಿರಿ, ಚೆನ್ನಾಗಿ ಮನಸ್ಸಿನಲ್ಲಿಡಿರಿ; ನಾನು ನಿಮ್ಮೆಲ್ಲರಿಗೂ ತೊಂದರೆ ಕೊಡಬೇಕೆಂದಾಗಲಿ, ಹಾಳು ಮಾಡಬೇಕೆಂದಾಗಲಿ, ನಿಮ್ಮ ಹೆಂಗುಸರು ಮಕ್ಕಳನ್ನು ಅನಾಥ

ರನ್ನಾಗಿ ಮಾಡಬೇಕೆಂದಾಗಲಿ ಇಲ್ಲಿಗೆ ಬಂದಿಲ್ಲ. ಅಂತಹ ದುರ್ಬುದ್ಧಿಯನ್ನು ಭಗವಂತನು ಎಂದೆಂದಿಗೂ ನನಗೆ ಕೊಡದಿರಲಿ! ನಾವೆಲ್ಲರೂ ಭಗವಂತನ ಮಕ್ಕಳು. ಅಣ್ಣ ತಮ್ಮಂದಿರಾದ ನಾವು ನಾವು ಒಬ್ಬರೊಡನೊಬ್ಬರು ಹೊಡೆದಾಡುವುದೂ ಒಬ್ಬರನ್ನೊಬ್ಬರು ಹಿಂಸೆ ಮಾಡುವುದೂ ಧರ್ಮವಲ್ಲ. ನಾನು ಮಹಮ್ಮದೀಯ ಧರ್ಮದ ಪವಿತ್ರವಾದ ಖುರಾನ್ ಪುಸ್ತಕವನ್ನು ಪ್ರತಿ ನಿತ್ಯವೂ ಪಾರಾಯಣ ಮಾಡುತ್ತ, ಅದರಲ್ಲಿ ಭಗವಂತನಿಂದ ಉಪದೇಶವಾದ ನೀತಿ ವಚನಗಳಿಗನುಸಾರವಾಗಿಯೇ ಮತ ವೈರವಿಲ್ಲದೆ ಸರ್ವ ಸಮ ದೃಷ್ಟಿಯಿಂದ ನಡೆಯುತ್ತ ಬರುವೆನೆಂದು ನಿಮ್ಮೆಲ್ಲರ ಮುಂದೆ ಪ್ರತಿಜ್ಞಾ ಪೂರ್ವಕವಾಗಿ ಹೇಳುತ್ತೇನೆ. ಯಾವ ರಾಜ್ಯದ ಪ್ರಜೆಗಳು ಸಂತೋಷದಿಂದ ನಲಿಯುತ್ತಿರುವರೋ ಆ ರಾಜ್ಯವೇ ರಾಜ್ಯ. ಪ್ರಜೆಗಳೇ ಇಲ್ಲದಿದ್ದರೆ ರಾಜನೊಬ್ಬನೇ ಯಾರನ್ನಾಳುವನು? ಯಾವ ರಾಜನು ತನ್ನ ಪ್ರಜೆಗಳನ್ನು ಮಕ್ಕಳಂತೆ ಪ್ರೀತಿಯಿಂದ ಕಾಪಾಡುತ್ತಿರುವನೋ ಅವನೇ ಧನ್ಯನು. ರಾಜನ ಐಶ್ವರ್ಯವೂ ಆನಂದವೂ ಸೌಭಾಗ್ಯವೂ ಪ್ರಜೆಗಳೇ ಆಗಿರುವರು. ಪ್ರಜಾ ಪಾಲನ ಶಕ್ತಿಯಿಲ್ಲದವನು ರಾಜನೇ ಅಲ್ಲ. ಪ್ರಜಾ ಹಿಂಸಕನು ಮನುಷ್ಯನೇ ಅಲ್ಲ; ಅವನು ಪಿಶಾಚಿಯ ಸ್ವರೂಪದ ನರಾಧಮನೇ ಸರಿ! ನೀವೆಲ್ಲರೂ ನನ್ನ ವಿಷಯದಲ್ಲಿ ಯಾವ ವಿಧವಾದ ಸಂದೇಹವನ್ನೂ ಇಟ್ಟುಕೊಳ್ಳಬೇಡಿರಿ. ಯಾರಿಗೇ ಆಗಲಿ ಏನಾದರೊಂದು ಕಷ್ಟವಾಗಲಿ ದುಃಖವಾಗಲಿ ಉಂಟಾದರೆ ಅಂಥವರು ನಿರ್ಭಯವಾಗಿ ನನ್ನಲ್ಲಿ ಬಂದು, ತಮ್ಮ ತಮ್ಮ ಕಷ್ಟ ಸುಖಗಳನ್ನು ಯಾವಾಗ ಬೇಕಾದರೂ ಹೇಳಿಕೊಳ್ಳಬಹುದು. ಅದನ್ನು ನಾನು ಸಾವಧಾನದಿಂದ ಕೇಳಿ, ಅದಕ್ಕೆ ಪರಿಹಾರವನ್ನುಂಟುಮಾಡುವೆನು. ಪ್ರಜೆಗಳ ಕಷ್ಟವೇ ನನ್ನ ಕಷ್ಟವೆಂದೂ ಅವರ ಸೌಖ್ಯವೇ ನನ್ನ ಸೌಖ್ಯವೆಂದೂ ಆತ್ಮ ಸಾಕ್ಷಿಯಾಗಿ ತಿಳಿದುಕೊಂಡು ಅದರಂತೆ ಆಚರಿಸುವೆನು. ಈ ದಿವಸ ಈ ವಿಷಯವನ್ನು ನಿಮ್ಮೆಲ್ಲರಿಗೂ ತಿಳಿಯಪಡಿಸುವ ಉದ್ದೇಶದಿಂದಲೇ ನಿಮಗೆ ಇಷ್ಟು ತೊಂದರೆಯನ್ನು ಕೊಡಬೇಕಾಯಿತು, ಕ್ಷಮಿಸಿರಿ. ಈ ರಾಜ್ಯಕ್ಕೆ ಆಧಾರ ಸ್ತಂಭ ಸ್ವರೂಪರಾಗಿರುವ ನೀವೆಲ್ಲರೂ, ರಾಜನೂ ಪ್ರಜೆಗಳೂ ಪರಸ್ಪರ ದೇವತಾ ಸ್ವರೂಪರೆಂದು ತಿಳಿದು ದೇಶ ಹಿತೈಷಿಗಳಾಗಿ ಕೀರ್ತಿ

ಶಾಲಿಗಳಾಗಬೇಕೆಂದು ವಿನಯದಿಂದ ಬೇಡಿಕೊಳ್ಳುವೆನು" ಎಂದು ಹೇಳಿ ಸುಮ್ಮನಾದನು. ಸಭೆಯಲ್ಲಿ ಎಲ್ಲಿ ನೋಡಿದರೂ, "ಧನ್ಯ! ಧನ್ಯ! ಬಾಬರ ಮಹಾಶಯನಿಗೆ ಧನ್ಯವಾದಗಳು!" ಎಂಬ ಕೋಲಾಹಲ ದೊಡನೆ ಕರತಾಡನ ಶಬ್ದವು ಗಗನ ಮಂಡಲವನ್ನು ತುಂಬಿಬಿಟ್ಟಿತು. ಅಷ್ಟಕ್ಕೆ ಆ ದಿನದ ಸಭಾ ಕಾರ್ಯವು ಪೂರೈಸಿದುದರಿಂದ ಸಭಿಕರೆಲ್ಲರೂ ತಮ್ಮ ರಾಜನ ಉದಾತ್ತ ಭಾಷಣವನ್ನೂ ಅದರಲ್ಲಿ ತುಂಬಿ ತುಳುಕು ತ್ತಿರುವ ಪ್ರಜಾ ವಾತ್ಸಲ್ಯ, ದೇಶ ಭಕ್ತಿ ಮುಂತಾದ ಸುಗುಣಗಳನ್ನೂ ಹೊಗಳುತ್ತ ತಮ್ಮ ತಮ್ಮ ಗೃಹಾಭಿಮುಖವಾಗಿ ತೆರಳಿದರು. ಬಾಬ ರನೂ ಹುಮಾಯೂನನೂ ಆನಂದಸಿಂಹನೂ ಅರಮನೆಯನ್ನು ಪ್ರವೇಶಿ ಸಿದರು.

ಮಧ್ಯಾಹ್ನ ಕಾಲವು ಸಮೀಪಿಸುತ್ತ ಬಂದಿತು. ಊಟ ಉಪಚಾರ ಗಳೆಲ್ಲವೂ ನಡೆದುವು. ಬಾಬರನು ಹುಮಾಯೂನನನ್ನು ಕುರಿತು, "ಅಯ್ಯಾ! ನೀನು ರಾಜಾಸ್ಥಾನಕ್ಕೆಹೋಗಿ ರಾಜ್ಯಾಡಳಿತದ ಮುಖ್ಯಾಂಶ ಗಳನ್ನು ತಿಳಿದುಕೊಳ್ಳುವ ಪ್ರಯತ್ನಮಾಡು" ಎನ್ನಲು, ಮಗನು ತಂದೆಯ ಅಪ್ಪಣೆಯನ್ನು ಗೌರವಿಸಿದನು. ಆನಂದಸಿಂಹನೂ ಬಾಬ ರನೂ ಅರಮನೆಯಲ್ಲಿ ಸ್ವಲ್ಪ ಹೊತ್ತು ವಿನೋದವಾಗಿ ಮಾತನಾಡು ತ್ತಿದ್ದರು. ಆಮೇಲೆ ಬಾಬರನು, "ಮಿತ್ರನೇ! ನೀನು ಹಿಂದೆ ನನ್ನನ್ನು ಕೊಲ್ಲಬೇಕೆಂದು ಯೋಚಿಸಿದ ಕಾರಣವೇನೆಂಬುದನ್ನು ಯಾವಾಗ ಲಾದರೂ ವಿಸ್ತರಿಸುವೆನೆಂದು ಹೇಳಿದ್ದೆಯಷ್ಟೆ! ಈಗ ಹೇಳು, ಭಯ ವಿಲ್ಲ, ನಾಚಿಕೆಪಡಬೇಡ" ಎಂದನು.

ಆನಂದಸಿಂಹ.—ಮಹಾ ಪ್ರಭೋ! ವಿಜ್ಞಾಪಿಸುವೆನು, ಲಾಲಿಸ ಬೇಕು. ನಾನು ಜಾತಿಯಲ್ಲಿ ರಾಜಪೂತರವನು. ನಾನು ಎರಡು ವರ್ಷದ ಬಾಲಕನಾಗಿರುವಾಗಲೇ ನನ್ನ ತಂದೆಯು ಪರಲೋಕವಾಸಿ ಯಾದನು; ನನ್ನ ತಾಯಿಯು ದಾರಿದ್ರ್ಯ ದುಃಖದಿಂದ ನನ್ನನ್ನು ಕರೆದು ಕೊಂಡು ಈ ಡೆಲ್ಲೀ ಪಟ್ಟಣದ ಕಡೆಗೆ ಹೊರಟುಬಂದಳು. ಆ ಕಾಲದಲ್ಲಿ ಇಬ್ರಾಹಿಂ ಲೋಡಿಯ ತಂದೆಯು ಇಲ್ಲಿ ರಾಜ್ಯಭಾರ ಮಾಡುತ್ತಿದ್ದನು. ನಮ್ಮ ತಾಯಿಯು ಹೇಗೋ ರಾಜಾಶ್ರಯವನ್ನು ಹೊಂದಿ ಅರಮನೆಯ

ಅಂತಃಪುರದಲ್ಲಿ ಒಂದು ಕೆಲಸಕ್ಕೆ ಸೇರಿಕೊಂಡು ಅದರ ಮೂಲಕ ಹೊಟ್ಟೆಹೊರೆದುಕೊಳ್ಳುತ್ತ ನನ್ನನ್ನು ಸಾಕಿದಳು. ರಾಜ ಪ್ರಾಸಾದ ದಲ್ಲಿಯೇ ಬೆಳೆದ ನನಗೆ ಆ ರಾಜ ವೈಭವವನ್ನೂ ಅಧಿಕಾರದ ದರ್ಪವನ್ನೂ ನೋಡಿ ನೋಡಿ, ಆ ಚಿಕ್ಕಂದಿನಲ್ಲಿಯೇ ನಾನೂ ರಾಜನಾಗಬೇಕೆಂಬ ಮಹತ್ವಾಕಾಂಕ್ಷೆಯುಂಟಾಯಿತು. ಬಾಲಕರ ಸಂಗಡ ಆಟವಾಡು ವಾಗ ಕೂಡ, "ನಾನು ರಾಜನಾಗುತ್ತೇನೆ, ನೀವು ಪ್ರಜೆಗಳಾಗಿರಿ" ಎಂದು ಹೇಳಿ ನಾನೇ ರಾಜನಾಗಿ ಆಟವನ್ನಾಡುತ್ತಿದ್ದೆನು. ಇಬ್ರಾಹಿಂ ಲೋಡಿಯೂ ಆತನ ತಂದೆಯೂ ಬೇಟೆಯಾಡುವುದರಲ್ಲಿ ಬಹಳ ಆಸಕ್ತರಾಗಿದ್ದರು. ನಾನು ಹದಿನಾರು ವರ್ಷದ ಪ್ರಾಯದವನಾಗು ತ್ತಲೆ, ನಮ್ಮ ತಾಯಿಯ ಅಪೇಕ್ಷೆಯಂತೆ, ಬೇಟೆಗಾರರ ಪಂಗಡದಲ್ಲಿ ನನಗೊಂದು ಉದ್ಯೋಗವು ದೊರೆತು, ಆಗಿನಿಂದ ಬೇಟೆಯಾಡಲು ನಾನೂ ಹೋಗುತ್ತಿದ್ದೆನು; ಇದರ ಜೊತೆಯಲ್ಲಿ ಯುದ್ಧ ಕಲೆಯನ್ನೂ ಅಭ್ಯಾಸ ಮಾಡಿ ಬರಬರುತ್ತ ನಾನೊಬ್ಬ ವೀರನೇ ಆದೆನು. ಈ ಸಂದರ್ಭದಲ್ಲಿಯೇ ಇಬ್ರಾಹಿಂ ಲೋಡಿಯೂ ಪಟ್ಟಕ್ಕೆ ಬಂದನು. ನಾನೂ ಆತನೂ ಬಾಲ್ಯ ಸ್ನೇಹಿತರಾದುದರಿಂದ ನನ್ನ ಮೇಲೆ ಆತನ ಪ್ರೇಮವು ಬಹಳವಾಗಿದ್ದಿತು. ಬರಬರುತ್ತ ನಾನೊಬ್ಬ ದೊಡ್ಡ ಅಧಿಕಾರಿಯಾದೆನು. ಇಬ್ರಾಹಿಂ ಲೋಡಿಯ ತಾಯಿಯು ಅನಾಥೆಯಾದೊಬ್ಬ ರಾಜಪೂತ ಕುವರಿಯನ್ನು ಬಾಲ್ಯದಿಂದಲೂ ಪಾಲಿಸುತ್ತಿದ್ದಳು. ಆ ಹುಡುಗಿಯನ್ನು ನನಗೆ ಕೊಟ್ಟು ವಿವಾಹವೂ ಜರುಗಿತು. ಅಷ್ಟರಲ್ಲಿ ನಮ್ಮ ತಾಯಿಯೂ ಪರಲೋಕ ವಾಸಿಯಾದಳು. ನಾವು ನೂತನ ದಂಪತಿಗಳು ಅನ್ಯೋನ್ಯ ಪ್ರೀತಿಯಿಂದ ಕಾಲ ಯಾಪನೆ ಮಾಡುತ್ತಿದ್ದೆವು. ಆಗಲೂ ಕೂಡ ನಾನು ರಾಜನಾಗಬೇಕೆಂಬ ಮಹತ್ವಾಕಾಂಕ್ಷೆಯು ನನ್ನನ್ನು ಬಿಟ್ಟಿರಲಿಲ್ಲ. ಯಾರಾದರೂ ವಿದ್ವಾಂಸರಾಗಲಿ ಜ್ಯೋತಿಷ್ಕರಾಗಲಿ ನನ್ನ ದೃಷ್ಟಿಗೆ ಬಿದ್ದಾಗಲೆ, "ನಾನು ರಾಜನಾಗಲು ಏನು ಮಾಡಬೇಕು?" ಎಂಬ ಪ್ರಶ್ನೆಯನ್ನು ಕೇಳುತ್ತಲೇ ಇದ್ದೆನು. ಹೀಗಿರುವಲ್ಲಿ, ಒಂದು ದಿನ ಯಾವನೋ ಒಬ್ಬ ಜೋಯಿಸನು, "ಅಯ್ಯಾ, ಈ ಪ್ರಪಂಚದಲ್ಲೆಲ್ಲ ಅತ್ಯುತ್ತಮವಾದ ರತ್ನವೆನಿಸಿದ **ಕೋಹಿನೂರ್** ಎಂಬುದೊಂದು ವಜ್ರ

ಪಿದೆ. ಅದು ಯಾರ ಕೈಯಲ್ಲಿರುವುದೋ ಅವರು ರಾಜರಾಗುವರು; ಅವರಿಗೆ ಸಕಲ ಸೌಭಾಗ್ಯಗಳೂ ಅನಾಯಾಸವಾಗಿ ಕೈಸೇರುವುವು'' ಎಂದು ಹೇಳಿದನು. ಅಂದಿನಿಂದ ನಾನು ಅದನ್ನು ಸಂಪಾದಿಸುವುದಕ್ಕಾಗಿ ಯತ್ನಿಸುತ್ತಿದ್ದೆನು. ವಿಚಾರಿಸುವಲ್ಲಿ, ಆ ರತ್ನವು ನನ್ನ ಪರಮ ಮಿತ್ರನೂ ನಮ್ಮ ರಾಜನೂ ಆದ ಇಬ್ರಾಹಿಂ ಲೋಡಿಯ ವಶದಲ್ಲಿದೆಯೆಂದು ತಿಳಿದು ಬಂದಿತು. ನಾನು ದುರಾಶಾ ಪಿಶಾಚ ಗ್ರಸ್ತನಾಗಿ ಸ್ನೇಹಿತನೆಂಬ ಅಭಿಮಾನವನ್ನು ತೊರೆದು, ಹೇಗಾದರೂ ಮಾಡಿ ಉಪಾಯದಿಂದ ಆ ಮಣಿಯನ್ನು ಎತ್ತಿಹಾಕಬೇಕೆಂದು ಯೋಚಿಸಿದೆನು. ಈ ಕಾಲದಲ್ಲಿಯೇ ತಾವು ತಮ್ಮ ಅಪಾರವಾದ ಸೇನಾ ಸಮುದ್ರದಿಂದೊಡಗೂಡಿ ಬಂದು ಯುದ್ಧದಲ್ಲಿ ಅವನನ್ನು ಸಂಹರಿಸಿದಿರಷ್ಟೆ....

ಬಾಬರ.—ನಿಜ, ಆದರೆ ನೀನು ನನ್ನನ್ನು ಕೊಲ್ಲಲೆಳಸಿದುದೇಕೆ?

ಆನಂದ.—ಹೇಳುವೆನು; ಇಬ್ರಾಹಿಂ ಲೋಡಿಯು ಸತ್ತ ಮೇಲೆ ಆ ರತ್ನವು ಅವನ ತಾಯಿಯ ಕೈಸೇರಿತು, ರಾಜ್ಯವು ತಮ್ಮ ಕೈಸೇರಿತು. ಮಹಾ ಪ್ರಭೋ! ಇನ್ನುಮುಂದೆ ಹೇಳಲಾರೆನು, ಕ್ಷಮಿಸಬೇಕು.

ಬಾಬರ.—ಹೇಳು, ಹೇಳು; ಇಷ್ಟೆಲ್ಲವನ್ನೂ ಹೇಳಿ ಮುಂದಿನ ಸ್ವಲ್ಪ ಭಾಗವನ್ನೇಕೆ ಬಚ್ಚಿಡುವೆ? ಅದನ್ನೂ ಹೇಳಿಬಿಡು.

ಆನಂದ.—ಭಯವಾಗುತ್ತದೆ; ತಾವು ದಯವಿಟ್ಟು ಒಬ್ಬ ವ್ಯಕ್ತಿಗೆ ಕ್ಷಮಾಪಣೆಯನ್ನು ದಯಪಾಲಿಸುವುದಾದರೆ ಹೇಳುವೆನು.

ಬಾಬರ.—ಓಹೋ! ಅಗತ್ಯವಾಗಿ ಆಗಬಹುದು. ಯಾವ ವ್ಯಕ್ತಿ? ಎಂತಹ ಅಪರಾಧವಾದರೂ ಅದನ್ನು ಒಪ್ಪಿಕೊಳ್ಳುವವರಿಗೆ ನಿಜವಾಗಿಯೂ ಕ್ಷಮೆಯು ಇದ್ದೇ ಇದೆ. ನಾನು ಕ್ಷಮಿಸಿರುವೆನು, ಹೇಳು.

ಆನಂದ.—ತಾವು ಯುದ್ಧದಲ್ಲಿ ಇಬ್ರಾಹಿಂ ಲೋಡಿಯನ್ನು ಸಂಹರಿಸಿದರೂ ಅವನ ಕುಟುಂಬದವರನ್ನು ಅತ್ಯಾದರದಿಂದ ಪಾಲಿಸುತ್ತಿರುವಿರಲ್ಲವೆ! ಈ ನಿಮ್ಮ ಭಾವನೆಯು ಸ್ತುತ್ಯವಾದುದು. ಆದರೆ ''ಸ್ತ್ರೀ ಬುದ್ಧಿಃ ಪ್ರಳಯಾಂತಕಃ'' ಎನ್ನುವಂತೆ ಆತನ ತಾಯಿಯು ತಮ್ಮನ್ನು ಸರ್ವನಾಶ ಮಾಡಲು ಯೋಚಿಸುತ್ತಿರುವಳು.

ಬಾಬರ.—(ಆಶ್ಚರ್ಯದಿಂದ) ನಾನು ಆಕೆಗೆ ಮಾಡಿದ ಅಪರಾಧ ವೇನು? ಓಹೋ! ತಿಳಿಯಿತು; ಮುಯ್ಯಿಗೆ ಮುಯ್ಯಿ ಮಾಡ ಬೇಕೆಂದಿರುವಳೋ ಏನೊ? ಆಗಲಿ, ಆ ಮುಯ್ಯಿ ತೀರಿಸಿಕೊಳ್ಳುವ ಕಾರ್ಯದಲ್ಲಿ ನಿನ್ನನ್ನೇ ಯೋಜಿಸಿರುವಂತೆ ಕಾಣುವುದು, ಅಲ್ಲವೆ?

ಆನಂದ.—(ನಾಚಿಕೆಯಿಂದ ತಲೆ ತಗ್ಗಿಸಿ) ನಿಜ, ತಮ್ಮ ಊಹೆಯು ಸತ್ಯವಾದುದು: ನಾನೇ ಆಕೆಗೆ ಸಹಾಯಕನು.

ಬಾಬರ.—ಒಳ್ಳೆಯದು, ಇದರಿಂದ ನಿನಗಾಗುವ ಲಾಭವೇನು?

ಆನಂದ.—ಲಾಭವೆ? ಅದೇ, ಅದೇ, ಆ ಕೋಹಿನೂರು ರತ್ನ. ನನಗೆ ಅದು ಲಭ್ಯವಾಗಬೇಕಾದರೆ ನಾನು ನಿಮ್ಮನ್ನು..ಕೊ..ಲ್ಲ.. ಬೇ....

ಬಾಬರ.—ಹಾಗಾದರೆ ನೀನೇಕೆ ನನ್ನನ್ನು ಕೊಲ್ಲಲಿಲ್ಲ?

ಆನಂದ.—ಪರೋಪಕಾರಕ್ಕಾಗಿಯೇ ಹಗಲೂ ಇರುಳೂ ತಮ್ಮ ದೇಹವನ್ನು ಕೂಡ ಅರ್ಪಿಸಿರುವ ತಮ್ಮಂತಹ ಉದಾರ ಚರಿತರನ್ನು ಯಾವ ಮನುಷ್ಯ ಪಾತ್ರದವನು ವಧೆ ಮಾಡಬಲ್ಲನು? ತಾವು ನಿನ್ನೆ, ಮೊನ್ನೆ, ಆ ದಿನ ರಾತ್ರಿ ತಮ್ಮ ಪ್ರಾಣದ ಮೇಲಿನ ಆಶೆಯನ್ನು ಕೂಡ ತೊರೆದು, ಧಗಧಗಿಸಿ ಉರಿಯುತ್ತಿದ್ದ ಮನೆಯೊಳಗೆ ನುಗ್ಗಿ ಬಾಲಕ ನಾದ ವೀರಸಿಂಹನನ್ನು ಉದ್ಧರಿಸಿದಿರಿ. ಅದಕ್ಕೂ ಹಿಂದೆ ಸತ್ರದಲ್ಲಿ ಆ ಮುದುಕಿಯ ಶುಶ್ರೂಷೆಯನ್ನು ನಿರ್ವಂಚನೆಯಿಂದ ಮಾಡಿದಿರಿ. ಇವೆರಡೂ ನನ್ನ ಪ್ರತ್ಯಕ್ಷಾನುಭವವಾದುವು. ಅಪ್ರತ್ಯಕ್ಷವಾಗಿ ತಮ್ಮ ಸದ್ವರ್ತನೆಯ ಗುಣಾವಳಿಯನ್ನು ಈ ನನ್ನ ಕಿವಿಗಳಿಂದಲೇ ಕೇಳಿರು ತ್ತೇನೆ. ಅಲ್ಲದೆ, ತಾವು ಜಾತಿಯಲ್ಲಿ ಮುಹಮ್ಮದೀಯರಾಗಿದ್ದು ಹಿಂದೂ ಜನಗಳ ವಿಷಯದಲ್ಲಿ ಸಹಾನುಭೂತಿಯನ್ನು ತೋರಿಸುತ್ತಿರು ವುದು ಪರಮಾಶ್ಚರ್ಯವಾದ ವಿಷಯ. ಹೀಗೆ ಸರ್ವ ಸಮ ದೃಷ್ಟಿಯನ್ನು ತೋರಿದ ಮುಹಮ್ಮದೀಯ ಪ್ರಭುಗಳು ಯಾರೂ ಇದುವರೆಗೆ ಇಲ್ಲಿಗೆ ಬಂದುದಿಲ್ಲ. ಈ ವಿಷಯಗಳೆಲ್ಲವನ್ನೂ ಮೂರು ನಾಲ್ಕು ದಿನಗಳು ಒಬ್ಬನೇ ಕುಳಿತು ಆಲೋಚಿಸಿದೆನು. ಕೊನೆಗೆ, ನನ್ನ ಸಂಕಲ್ಪದ

ವಿಷಯವಾಗಿ ನನಗೇ ನಾಚಿಕೆಯೂ ಪಶ್ಚಾತ್ತಾಪವೂ ಉಂಟಾಯಿತು. ಆದುದರಿಂದ ನಾನು ಆ ರಾಕ್ಷಸೀ ಕೃತ್ಯದ ಆಲೋಚನೆಯನ್ನು ಬಿಟ್ಟು, ಬಿಟ್ಟು ತಮ್ಮಲ್ಲಿ ಕ್ಷಮಾಪಣೆಯನ್ನು ಪ್ರಾರ್ಥಿಸಿದೆನು.

ಬಾಬರ.—ಅಯ್ಯಾ! ಪರೋಪಕಾರ ಮಾಡುವುದಕ್ಕೆ ಜಾತಿ ಮತ ಗಳೇನೂ ಕಾರಣವಲ್ಲ. ಯಾವ ಕುಲವಾದರೇನು? ಯಾವ ಜಾತಿ ಯಾದರೇನು? ಯಾವ ಪ್ರಾಣಿಯಾದರೇನು? ದುಃಖಾರ್ತರಾದವರಿಗೆ ತನ್ನ ಕೈಯಲ್ಲಾದಷ್ಟು ಉಪಕಾರ ಮಾಡುವುದಕ್ಕಾಗಿಯೇ ಭಗವಂತನು ಈ ಮನುಷ್ಯ ಜನ್ಮವನ್ನು ಸೃಷ್ಟಿಸಿರುವನು. ಮೂಕ ಪ್ರಾಣಿಗಳೂ ಸಸ್ಯಾದಿಗಳೂ ಕೂಡ ಮನುಷ್ಯರಿಗೆ ಎಷ್ಟೋ ವಿಧದಲ್ಲಿ ಉಪಕಾರವನ್ನೇ ಮಾಡುತ್ತಿರುವಾಗ, ಮನುಷ್ಯರಾಗಿ ಹುಟ್ಟಿ ಜ್ಞಾನ ಸಂಪನ್ನರಾಗಿರುವ ನಾವು ಆರ್ತರಿಗೆ ನಮ್ಮ ಕೈಯಲ್ಲಾದ ಮಟ್ಟಿಗೆ ಸಹಾಯವನ್ನು ಮಾಡ ದಿರಬಹುದೆ? ದುಃಖಿಗಳನ್ನು ಕಂಡು ಕಂಡೂ ಸಹಾಯಮಾಡದೆ ತಟಸ್ಥ ನಾಗಿರತಕ್ಕವನು ಮನುಷ್ಯನೆ? ನೀನು ಯಾವ ತುಚ್ಛವಾದ ದುರಾಶೆ ಯಿಂದ ನನ್ನನ್ನು ವಧಿಸಲು ಸಂಕಲ್ಪಿತನಾಗಿದ್ದರೂ, ನಿನ್ನಲ್ಲಿರುವ ವಿಚಾರ ಶಕ್ತಿಯಿಂದ ನಿನ್ನ ಅಭಿಪ್ರಾಯವು ನೀಚವಾದುದೆಂದು ಯಾವಾಗ ತಿಳಿದುಕೊಂಡೆಯೋ ಆಗಲೇ ನೀನೊಬ್ಬ ಸಹಜವಾದ ಮನುಷ್ಯನಾದೆ. ಇಂದಿನಿಂದ ನೀನು ನನ್ನ ಪ್ರಾಣ ಸಂರಕ್ಷಕನಾಗಿ ಎಡೆಬಿಡದೆ ನನ್ನೊಡನೆ ನಿರಬೇಕು. ಈ ನನ್ನ ಶರೀರವು ನಿನ್ನದಾಗಿರುವುದು. ಇದುವರೆಗೆ ನೀನು ನನ್ನಮೇಲೆ ನಡೆಯಿಸಿದ ಸರ್ವಾಪರಾಧಗಳನ್ನೂ ತ್ರಿಕರಣ ಶುದ್ಧಿಯಿಂದ ಮನ್ನಿಸಿರುವೆನು.

ಆನಂದ.—ಮಹಾ ಪ್ರಭೋ! ತಮ್ಮ ಅಪ್ಪಣೆಗೆ ಪ್ರತಿಯಾಡುವು ದಿಲ್ಲ. ಆದರೆ....ಆದರೆ....ಇನ್ನೂ ದೊಡ್ಡದೊಂದು ತೊಂದರೆಯು ನನಗುಂಟು.

ಬಾಬರ.—ಓಹೋ! ಮತ್ತೇನು ಬಂದಿತು ತೊಂದರೆ?

ಆನಂದಸಿಂಹನು ಈ ಪ್ರಶ್ನೆಗೆ ಏನೇನೋ ಹೇಳಿದನು. ಅದೆಲ್ಲ ವಾಚಕರಿಗೆ ಮುಂದೆ ಗೊತ್ತಾಗುವುದು.

## ಆರನೆಯ ಪರಿಚ್ಛೇದ

ಆಧುನಿಕ ಕಾಲದ ದೆಹಲೀ ನಗರವು ನಮ್ಮ ಸಾರ್ವಭೌಮರಾದ ಐದನೆಯ ಜಾರ್ಜ್ ಚಕ್ರವರ್ತಿಗಳವರ ಬ್ರಿಟಿಷ್ ಸಾಮ್ರಾಜ್ಯದ ಕೃಪಾ ಕಟಾಕ್ಷಕ್ಕೆ ಪಾತ್ರವಾಗಿ, ಹಿಂದೂಸ್ಥಾನದ ಮುಖ್ಯ ರಾಜಧಾನಿಯಾಗಿ, ಸಕಲೈಶ್ವರ್ಯಗಳಿಗೂ ಮಾತೃಸ್ಥಾನವಾಗಿ ಮೆರೆಯುತ್ತಿರುವುದು. ಈಗ ಆ ಪಟ್ಟಣವನ್ನು ನೋಡಿದರೆ, ಅಲ್ಲಲ್ಲಿ ಮುಗಿಲನ್ನು ಮುಟ್ಟುತ್ತಿರುವ ಮಹಲುಗಳೂ, ನಂದನ ವನಕ್ಕೆ ಸಮಾನವಾದ ಉದ್ಯಾನಗಳೂ, ಕುಬೇರನನ್ನು ತೃಣೀಕರಿಸುವಂತಿರುವ ಕೋಟ್ಯಾಧೀಶ್ವರರ ಅಂಗಡಿಗಳೂ, ಜುಮ್ಮಾ ಮಸೀದಿ, ಕುತುಬ್ ಮಿನಾರ್, ಮುಂತಾದ ಪ್ರಸಿದ್ಧ ಕಟ್ಟಡಗಳೂ ಪ್ರೇಕ್ಷಕರಿಗೆ ಆಶ್ಚರ್ಯಾನಂದಗಳನ್ನು ಏಕ ಕಾಲದಲ್ಲಿಯೇ ಉಂಟುಮಾಡುತ್ತಿರುವುವು. ನಾವು ಹೇಳುತ್ತಿರುವ ಈ ಕಥೆಯು ನಡೆದ ಕಾಲದ ಸ್ಥಿತಿಗೂ, ಈ ಕಾಲದ ಸ್ಥಿತಿಗೂ ತೂಕ ಮಾಡಿ ನೋಡಿದರೆ, ಅಜಗಜ ನ್ಯಾಯವಾಗಿರುವುದು. ಆ ಕಾಲದಲ್ಲಿ ದೆಹಲೀ ನಗರವು ಪಾಣಿಪತ್ತದ ಯುದ್ಧವೇ ಮುಂತಾದ ಭಯಂಕರ ಚಕ್ರಗತಿಗೊಳಪಟ್ಟು ಛಿನ್ನ ಭಿನ್ನವಾಗಿ ಹೋಗಿದ್ದಿತು. ಬಾಬರ ಮಹಾಶಯನು ರಾಜ್ಯ ಸೂತ್ರವನ್ನು ಧರಿಸಿದಂದಿನಿಂದ ಭಗ್ನಾವಶಿಷ್ಟವಾದ ಮುಖ್ಯ ಸ್ಥಳಗಳೆಲ್ಲವೂ ಜೀರ್ಣೋದ್ಧಾರವಾಗಿ ಕಂಗೊಳಿಸಲಾರಂಭಿಸಿದುವು. ಹೊಸ ವಸತಿ ಸ್ಥಳಗಳು ಏರ್ಪಟ್ಟುವು. ದರಿದ್ರರಿಗೆ ಧನ ಸಹಾಯವು ದೊರೆಯುತ್ತ ಬಂದಿತು. ಇದರಿಂದ ಅನೇಕಾನೇಕ ಹೊಸ ಮನೆತನದವರು ಬಂದು ದೆಹಲಿಯಲ್ಲಿ ವಾಸ ಮಾಡಲು ತೊಡಗಿದರು. ಜಲಾಶ್ರಯವಿಲ್ಲದೆ ಸೂರ್ಯನ ಪ್ರಖರ ಕಿರಣಗಳಿಂದ ಬಾಡಿ ಹೋದ ಉದ್ಯಾನದಂತಿದ್ದ ದೆಹಲೀ ಪಟ್ಟಣವು ಬಾಬರ ಮಹಾಶಯನ ಉದಾರ ಬುದ್ಧಿಯೆಂಬ ಶೀತಲ ಜಲ ಸೇಚನೆಯಿಂದ ಪುನಃ ಪಲ್ಲವಿಸಲು ಪ್ರಾರಂಭವಾಯಿತು. ಮೊದಲು ಇಲ್ಲಿ ವಾಸವಾಗಿದ್ದು ಯುದ್ಧದ ಭಯದಿಂದಲೂ, ಲೂಟಿ, ದಾಳಿ ಮುಂತಾದ ಉಪಹತಿಯ ಬೆಗಡಿನಿಂದಲೂ ಓಡಿಹೋಗಿದ್ದ ವರ್ತಕರೂ, ಐಶ್ವರ್ಯವಂತರೂ, ಕಲಾ ಕುಶಲರೂ ಇಲ್ಲಿಗೆ ಪುನಃ ಬಂದು ನಿಂತರು. ಬಡವರಾಗಿದ್ದವರು ಮಾತ್ರ, " ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡದು " ಎಂಬಂತೆ,

"ನಾವು ಎಲ್ಲಿದ್ದರೂ ಒಂದೇ; ಎಲ್ಲಿಗೆ ಹೋದರೂ ನಮಗೆ ಕಷ್ಟವೂ ಒಂದೇ, ಸುಖವೂ ಒಂದೇ" ಎಂದುಕೊಂಡು ಅಲ್ಲಿಯೇ ನೆಲಸಿದ್ದರು.

ಈಗ ನಾವು ಪುನಃ ಆಗ್ರಾ ಪಟ್ಟಣದ ಕಡೆಗೆ ಸ್ವಲ್ಪ ದೃಷ್ಟಿಯನ್ನು ತಿರುಗಿಸೋಣ. ರಾತ್ರಿಯ ವೇಳೆ; ಬಹಳ ಹೊತ್ತಾಗಿರಲಿಲ್ಲ; ಪ್ರಮದಾ ಕುಮಾರಿಯು ತನ್ನ ಮುದ್ದು ಮಗುವಾದ ರಂಗೀಲಾಲ ನನ್ನು ಮಗ್ಗುಲಲ್ಲಿ ಮಲಗಿಸಿಕೊಂಡು ಒಬ್ಬಳೇ ತನ್ನ ಮಂದಿರದಲ್ಲಿ ಮಲಗಿದ್ದಳು. ಮಗುವು ನಿದ್ರೆಮಾಡುತ್ತಿದ್ದಿತು. ಆ ಮನೆಯು ಅಷ್ಟೇನೂ ಬೆಲೆಯುಳ್ಳದ್ದಾಗಿರದಿದ್ದರೂ ನಿರ್ಮಲವಾಗಿಯೂ ಅಚ್ಚು ಕಟ್ಟಾಗಿಯೂ ಇದ್ದಿತು. ಪ್ರಮದೆಯು ಬಹು ಚತುರಳು; ಸಂಸಾರದ ಯಾವ ಯಾವ ಸಾಮಗ್ರಿಗಳು ಹೇಗೆ ಹೇಗೆ ಎಲ್ಲೆಲ್ಲಿ ಇರಬೇಕೋ ಹಾಗೆ ಹಾಗೆಯೇ ಅವನ್ನು ಅಲ್ಲಲ್ಲಿ ಕ್ರಮವಾಗಿ ಇರಿಸಿದ್ದಳು. ಇದರಿಂದ ಆ ಮನೆಯ ಅಂದವು ಮತ್ತಷ್ಟು ಹೆಚ್ಚಾಗಿದ್ದಿತು. ಪ್ರಮದೆಯು ನಿದ್ರೆ ಬಾರದಿದ್ದುದರಿಂದ ಆ ಕಡೆಗೆ ಈ ಕಡೆಗೆ ನೋಡುತ್ತ ಚಿಂತಾತುರ ಳಾಗಿದ್ದಳು. ಆಕೆಯ ವಯಸ್ಸು ಇಪ್ಪತ್ತು ಇಪ್ಪತ್ತೊಂದಿರಬಹುದು. ರೂಪವು ಅತಿ ಲಾವಣ್ಯದಿಂದ ತಿದ್ದಿ ಮಾಡಿದಂತಿರಲಿಲ್ಲವಾದರೂ ಸ್ವಭಾವ ವಾಗಿ ಸುಂದರವಾಗಿಯೂ ಮನೋಹರವಾಗಿಯೂ ಇದ್ದಿತು: ಸುನೀಳ ವಾಗಿಯೂ ಸೌಷ್ಠವವಾಗಿಯೂ ಇರುವ ಶರೀರ, ಸಾಧಾರಣ ಗೌರ ವರ್ಣ, ಮೇಘಶ್ಯಾಮ ವರ್ಣದ ನಿಡಿದಾದ ಕೇಶ ಪಾಶ, ತಾರಗೆಗಳಂತೆ ಹೊಳೆಯುವ ನೇತ್ರಗಳು, ವಿಸ್ತಾರವಾದ ಫಾಲ ಪ್ರದೇಶ, ನಿರ್ದುಷ್ಟ ವಾದ ಚಿತ್ತಾಕರ್ಷಕವಾದ ಚಾಂಚಲ್ಯದಿಂದೊಡಗೂಡಿದ ಕಟಾಕ್ಷ ವಿಕ್ಷೇಪಾದಿ ಅಂಗ ನ್ಯಾಸಗಳು, ಸದಾ ಪ್ರಶಾಂತವಾಗಿಯೂ ಗಂಭೀರ ವಾಗಿಯೂ ಮಂದಹಾಸಯುಕ್ತವಾಗಿಯೂ ಇರುವ ಮುಖಮಂಡಲ— ಹೀಗೆ ಒಪ್ಪುತ್ತ, ಆಕೆಯ ಹೆಸರು ಅನ್ವರ್ಥಕವಾಗಿಯೇ ಇದ್ದಿತೆಂದು ಧಾರಾಳವಾಗಿ ಹೇಳಬಹುದು. ಎಂತಹ ಕಷ್ಟ ಕಾಲ ಒದಗಿದರೂ ಆಕೆಯ ಮುಖ ಮುದ್ರೆಯು ಯಾವ ಮಾರ್ಪಾಡನ್ನೂ ಹೊಂದದೆ ಆನಂದ ದಿಂದಲೇ ಪರಿಪೂರ್ಣವಾಗಿರುತ್ತಿದ್ದಿತು. ಇಂತಹ ರಮಣೀ ರತ್ನವನ್ನು ಹೊಂದಿದ ಪುರುಷನೇ ಧನ್ಯನು. ಪುರುಷನಿಗೆ ಇಹ ಲೋಕದ ಸಂಸಾರ

ದಲ್ಲಿ ಸುಖದಾಯಕವಾದುದು ಇದೇ. ಸಕಲ ಸಾಮ್ರಾಜ್ಯ ಸೌಖ್ಯಗಳಿಗೂ ಇಂತಹ ಸದ್ಗೃಹಿಣಿಯೇ ತೌರು ಮನೆ. ಈ ದಿನ ಪ್ರಮದಾ ಕುಮಾರಿಯು ಯಾವುದೋ ಚಿಂತೆಯಲ್ಲಿ ಮಗ್ನಳಾಗಿರುವಳು. ರಾತ್ರಿ ಬಹಳ ಹೊತ್ತಾದರೂ ಆಕೆಗೆ ನಿದ್ರೆಯೇ ಬರಲಿಲ್ಲ. ಚಿಂತೆಗೂ ನಿದ್ರೆಗೂ ವೈರತ್ವ. ಮಲಗಿದ್ದವಳು ಹಾಗೆಯೇ ಎದ್ದು ಕುಳಿತುಕೊಂಡಳು. ದೀಪದ ಬೆಳಕು ಎಲ್ಲಾ ಕಡೆಗೂ ಹರಡಿದ್ದಿತು. ಆಕೆಯು ಈ ರೀತಿಯಾಗಿ ಆಲೋಚಿಸಿದಳು :—

"ಈ ಮನೆಯು ಇನ್ನು ಮುಂದೆ ಅರಮನೆಯಂತಾಗುವುದು, ನಾನು ರಾಣಿಯಾಗುವೆನು, ಈ ಮುದ್ದು ಬಾಲಕನು ಯುವರಾಜನಾಗುವನು, ಮಿತಿಯಿಲ್ಲದ ಐಶ್ವರ್ಯವೂ ಒಡವೆ ವಸ್ತುಗಳೂ ದೊರೆಯುವುವು, ನಮ್ಮ ದಾರಿದ್ರ್ಯವು ಓಡಿಹೋಗುವುದು." ಹೀಗೆ, ಮುಂದೆ ದೊರೆಯಹೋಗುವ ತನ್ನ ಸುಖಗಳ ಕಲ್ಪನೆಯಲ್ಲಿ ಮಗ್ನಳಾಗಿರುವಲ್ಲಿ, ಹಾಗೆಯೇ ಸ್ವಲ್ಪ ಸ್ವಲ್ಪ ನಿದ್ರೆಯು ಬರಲಾರಂಭಿಸಿತು; ಕೂಡಲೆ ಮಲಗಿ, ನಿದ್ದೆಹತ್ತಿ ಒಂದು ತಾಸು ಹಾಗೆಯೇ ನಿದ್ರಿಸಿರಬಹುದು. ಆಗ ಆಕೆಗೊಂದು ಕನಸು ಬಿದ್ದಿತು: ಆ ಕನಸಿನಲ್ಲಿ, ಸಂಧ್ಯಾ ಸಮಯ; ತಾನು ತನ್ನ ಪತಿಯೊಡನೆ ಒಂದು ಉದ್ಯಾನದಲ್ಲಿ ಆನಂದದಿಂದ ವಿಹರಿಸುತ್ತಿರುವಾಗ, ಒಂದು ವಿಚಿತ್ರ ವರ್ಣದ ಪಕ್ಷಿಯು ಅಲ್ಲಿಗೆ ಬಂದಂತೆಯೂ, ಅದನ್ನು ತಂದುಕೊಡೆಂದು ತನ್ನ ಪತಿಯನ್ನು ಕೇಳಿಕೊಂಡಂತೆಯೂ, ಪತಿಯು ಪತ್ನಿಯ ಅಪೇಕ್ಷೆಯನ್ನು ಸಲ್ಲಿಸುವುದಕ್ಕಾಗಿ ಅದನ್ನು ಹಿಡಿದು ತರಲು ಹೋದಾಗ ಬೇರೊಬ್ಬ ಮನುಷ್ಯನು ಅಲ್ಲಿಗೆ ಬಂದು, "ಖಬರದಾರ್! ಈ ಪಕ್ಷಿಯನ್ನು ನೀನು ಮುಟ್ಟಬೇಡ! ಅದು ನನಗೆ ಸಲ್ಲತಕ್ಕದ್ದು" ಎಂದು ಗಾಂಭೀರ್ಯದಿಂದ ಹೇಳುತ್ತ ತಡೆದ ಹಾಗೂ, ತನ್ನ ಪತಿಯು ಆ ಮನುಷ್ಯನ ಮಾತಿಗೆ ಭಯಪಟ್ಟು ಹಿಂದಿರುಗಿ ಬಂದ ಹಾಗೂ ಕಾಣಿಸಿತು. ಕೂಡಲೆ ನಿದ್ದೆ ತಿಳಿದು ಆಕೆಯು ಎದ್ದು ಕುಳಿತು, "ಇದೇನು ಸ್ವಪ್ನವೇ? ನಿಜ, ನಿಜ, ಸ್ವಪ್ನವೇ ಅಹುದು; ಆದರೆ ಅಚ್ಚ ರಾಜಪುತ್ರ ಕುಲದಲ್ಲಿ ಹುಟ್ಟಿದ ನನ್ನ ಪತಿಯು ಒಬ್ಬ ಯಃಕಶ್ಚಿತ ಮನುಷ್ಯನ ಮಾತುಗಳಿಗೆ ಭಯಪಟ್ಟು, ಕೃತಕಾರ್ಯನಾಗದೆ ಹಿಂದಿ

ರುಗಿ ಬರುವುದೇ? ಛೀ! ಛೀ! ಎಂದಿಗೂ ಇಲ್ಲ. ಆ ರಾಜಪೂತರಿಗೆ ಭಯವೆಂದರೇನು? ಇದೆಲ್ಲ ಸುಳ್ಳು, ಬರಿಯ ಭ್ರಮೆ. ಹಾಗಾದರೆ ಎಂದೂ ಇಲ್ಲದೆ ಈ ದಿನ ಈ ರೀತಿ ಕನಸು ಕಾಣಲು ಕಾರಣವೇನು? ಆತನ ಕಾರ್ಯವು ಸಫಲವಾಗಲಿಕ್ಕಿಲ್ಲವೇ? ಆತನು ಕೃತ ಕಾರ್ಯನಾಗಿಯೇ ಬರಲಿ; ಆತನು ವಿಜಯಿಯಾಗಲಿ'' ಎಂದು ದೇವರ ಸ್ಮರಣೆಯನ್ನು ಮಾಡುತ್ತ ಪುನಃ ಮಲಗಿದಳು. ನಿದ್ರೆಯು ಬರಲೇ ಇಲ್ಲ; ಆಗ ತಾನೆ ಸ್ವಪ್ನದಲ್ಲಿ ಕಂಡಿದ್ದ ವಿಷಯಗಳು ಪುನಃ ಪುನಃ ತರಂಗ ತರಂಗವಾಗಿ ಕಣ್ಣೆದುರಿಗೆ ಬರಲಾರಂಭಿಸಿದುವು.

ಈ ಸಮಯದಲ್ಲಿ ಹೊರಗಡೆ ಯಾರೋ ಬಾಗಿಲನ್ನು ತಟ್ಟಿದ ಶಬ್ದವಾಯಿತು; ಕೂಡಲೆ, 'ರಂಗೀಲಾಲ', 'ರಂಗೀಲಾಲ' ಎಂದು ಕೂಗಿದ ಶಬ್ದವೂ ಕೇಳಬಂದಿತು. ಪ್ರಮದೆಯು ಸಂಭ್ರಮದಿಂದ, ''ಅವರೇ ಬಂದರು'' ಎಂದುಕೊಂಡು, ಕೈಯಲ್ಲಿ ದೀಪವನ್ನು ತೆಗೆದುಕೊಂಡು ಹೊರ ಬಾಗಿಲ ಹತ್ತಿರಕ್ಕೆ ಬಂದಳು. ಪುನಃ 'ರಂಗೀಲಾಲ' ಎಂಬ ಧ್ವನಿಯಾಯಿತು. ಪ್ರಮದೆಯು, ''ಬಂದೆ, ಬಂದೆ'' ಎಂದು ಬಾಗಿಲನ್ನು ತೆರೆದಳು. ಆಕೆಯ ಪತಿಯು ಹಸನ್ಮುಖನಾಗಿ ಒಳಗೆ ಪ್ರವೇಶಿಸಿದನು. ಪತಿಯ ಮುಖಾವಲೋಕನದಿಂದ ಪ್ರಮದೆಗೆ ಅತ್ಯಾನಂದವಾಯಿತು; ಆತನು ಕೃತ ಕಾರ್ಯನಾಗಿಯೇ ಬಂದಿರುವನೆಂದು ಬೋಧೆಯಾಯಿತು. ಇಬ್ಬರೂ ಒಳಗೆ ಹೋದರು. ಪ್ರಮದೆಯು ಕೈಕಾಲುಗಳನ್ನು ತೊಳೆದುಕೊಳ್ಳಲು ಪತಿಗೆ ಒಂದು ತಂಬಿಗೆಯಲ್ಲಿ ನೀರನ್ನು ತಂದುಕೊಟ್ಟಳು. ಆತನು ಕೈಕಾಲು ತೊಳೆದುಕೊಂಡಮೇಲೆ ಇಬ್ಬರೂ ಮುಂಭಾಗದ ಪಡಸಾಲೆಯಲ್ಲಿ ಬಂದು ಕುಳಿತರು.

ಪ್ರಮದೆ.—ತಾವು ಕೈಕೊಂಡ ಕಾರ್ಯದಲ್ಲಿ ಜಯಶಾಲಿಯಾಗಿಯೇ ಬಂದಿರುವಿರಲ್ಲವೆ?

ಪತಿ.—ಇನ್ನೇನು ನಿನಗೆ? ಅದೇ ಚಿಂತೆ? ಪುನಃ....

ಪ್ರಮದೆ.—ಏಕೆ? ನಿರಾಶರಾಗಿ ಬಂದಿರುವಿರಾ?

ಪತಿ.—ಇಲ್ಲ, ಆದರೆ ಬಾಬರ ಮಹಾಶಯನು ನಿಜವಾಗಿಯೂ ಉತ್ತಮ ಪುರುಷ!

ಪ್ರಮುದೆ.—ಉತ್ತಮ ಪುರುಷನೊ ಪ್ರಥಮ ಪುರುಷನೊ? ತಮ್ಮ ವ್ಯಾಕರಣ ಪಾಂಡಿತ್ಯವು ನನಗೆ ಬೇಕಾಗಿಲ್ಲ. ಹೇಗಿದ್ದರೇನು? ತಮಗೆ ಧೈರ್ಯವು ಸಾಲದೆ ಮಧ್ಯಮ ಪುರುಷತ್ವವನ್ನು ಸ್ವೀಕರಿಸಿದಿರೆಂದು ಕಾಣುವುದು.

ಪತಿ.—ನಿನ್ನಷ್ಟು ವ್ಯಾಕರಣವನ್ನು ನಾನು ಕಲಿತು ವೈಯಾಕರಣಿ ಎಂಬ ಬಿರುದನ್ನು ಪಡೆದಿಲ್ಲ. ನಾನು ಎಂತಹ ಪುರುಷನೆಂಬುದು ನಿನಗೆ ತಿಳಿದೇ ಇದೆಯಷ್ಟೆ? ಯಾವಾಗ ಯಾವ ಕಾರ್ಯದಲ್ಲಿ ನಾನು ಅಧೈರ್ಯ ಪಟ್ಟಿರುವೆನು? ಈಗ ಆ ಕೆಲಸವನ್ನು ನಾನೇ ನಿಷೇಧಿಸಿ ಬಂದಿರುವೆನು.

ಪ್ರಮುದೆ.—ಹಾಗಾದರೆ ನನ್ನ ಸ್ವಪ್ನವೇ ನಿಜವಾಯಿತು! (ತಿರಸ್ಕಾರದಿಂದ) ಈಗಲೂ ಬರಿಗೈಯೆೇ.

ಪತಿ.—(ಶಾಂತ ಮುದ್ರೆಯಿಂದ) ಪ್ರಮುದೇ, ನಿನಗೇನು ಗೊತ್ತಿದೆ? ಸ್ವಪ್ನವೇನು?

ಪ್ರಮುದೆ.—ನನಗೆಲ್ಲ ಗೊತ್ತಾಯಿತು; ನಿಮ್ಮ ಹೃದಯದಲ್ಲಿ ಭಯವೋ ಸಂಶಯವೋ ತುಂಬಿಕೊಂಡಿದೆ.

ಹೀಗೆಂದು ಹೇಳಿ ಪ್ರಮುದೆಯು ಸ್ವಪ್ನದ ವಿಚಾರವನ್ನು ತಿಳಿಸಿದಳು.

ಪತಿ.—ಓಹೋ! ಇದರಿಂದಲೇ ನೀನಿಷ್ಟು ಉದ್ದವಾಗಿ ಮಾತನಾಡುವೆ. ನಿನಗೆ ಗೊತ್ತಾದ ಎಲ್ಲ ವಿಷಯಗಳೂ ಯಾವುವು?

ಪ್ರಮುದೆ.—(ಮರ್ಮ ಭೇದಕ ಧ್ವನಿಯಿಂದ) ನೀವು ರಾಜಪೂತರಾಗಿದ್ದೂ ಹೆದರುತ್ತೀರೆಂದು....

ಪತಿ.—ಪ್ರಮುದೇ, ನೀನು ಯಾವ ಉದ್ದೇಶವನ್ನಿಟ್ಟುಕೊಂಡು ಹೀಗೆ ಹೇಳುವೆ?

ಪ್ರಮುದೆ.—ತಮ್ಮ ಮಾತುಗಳ ಮೇಲಿಂದಲೇ ಗೊತ್ತಾಗುವುದು; ಅಲ್ಲದೆ, ಬರಿಗೈಯಲ್ಲಿ ಬಂದುದು ಅದನ್ನು ಸಿದ್ಧಮಾಡುತ್ತದೆ; ಇದಕ್ಕೂ ಹೆಚ್ಚಾಗಿ ಇನ್ನೇನು ಬೇಕು? ಬಾಬರನ ಔದಾರ್ಯಕ್ಕೂ ಅವನ ಬೆಡಗಿನ ಮಾತಿಗೂ ಮರುಳಾಗಿ ತಾವು ಹಾಗೆಯೇ ಹಿಂದಿರುಗಿದ ಹಾಗಿದೆ.

ಪತಿ.—ಕೇಳು, ನಾನು ಬಾಬರನಿಗೆ ಅಂಜಲಿಲ್ಲ; ನಿನಗೇನೋ

ನನ್ನ ಮಾತುಗಳಲ್ಲಿ ನಂಬಿಕೆಯಿಲ್ಲವೆಂದು ಕಾಣುವುದು. ಆದರೆ ಆತನು ನಿಶ್ಚಯವಾಗಿಯೂ ನೀಚ ಮನುಷ್ಯನಲ್ಲ; ಪರಮ ಉದಾರಿ; ಹಿಂದೂ ಮುಸಲ್ಮಾನರೆಂಬ ಭೇದವೇ ಇಲ್ಲದೆ, ಎಲ್ಲರಲ್ಲಿಯೂ ಏಕ ರೀತಿಯಾದ ಮೈತ್ರಿಯನ್ನುಳ್ಳವನಾಗಿ, ದರಿದ್ರರಿಗೆ ಧನ ಸಹಾಯವನ್ನೂ, ವಿಪನ್ನರಿಗೆ ತನ್ನ ದೇಹ ದಂಡನೆಯ ಮೂಲಕವಾದ ಸಹಾಯವನ್ನೂ ಮಾಡುತ್ತಾ ಸಕಲ ಸದ್ಗುಣ ಭರಿತನಾಗಿರುವನು. ಅಂತಹ ಮನುಷ್ಯನನ್ನು ಅನ್ಯಾಯ ವಾಗಿ ಕೊಲ್ಲುವುದು ಕೇವಲ ಪೈಶಾಚಿಕ ಕೃತ್ಯವೆಂದು ಆಲೋಚಿಸಿ, ನನ್ನ ನಡತೆಗೆ ನಾನೇ ನಾಚಿಕೊಂಡು ಹಾಗೆಯೇ ಬಂದಿರುವೆನು.

ಪ್ರಮದೆ.—ಬೇಗಮ್ಮಳಿಗೆ ಕೊಟ್ಟ ವಚನದ ಪಾಡು ಏನಾಯಿತು?

ಪತಿ.—ಇಂತಹ ಸಂದರ್ಭದಲ್ಲಿ ಯೋಗ್ಯಾಯೋಗ್ಯ ವಿಚಾರ ಮಾಡಬೇಕಾದುದು ಆವಶ್ಯಕ; ವಿಚಾರಣೆಯಲ್ಲಿ, ಯಾವುದಾದರೂ ಒಂದು ಕಾರ್ಯವು ಅಯೋಗ್ಯವೆಂದು ಕಂಡುಬಂದರೆ, ಅದು ವಚನ ಬದ್ಧವಾಗಿದ್ದರೂ ಅದನ್ನು ಮಾಡದೆ ಬಿಡುವುದರಿಂದ ವಚನ ಭಂಗ ದೋಷವು ಪ್ರಾಪ್ತವಾಗುವುದಿಲ್ಲ. ಅಲ್ಪ ಸೌಖ್ಯಕ್ಕಾಗಿ ಅನುಕೂಲ್ಯ ವಾದ ನಿರಪರಾಧಿಗಳ ಪ್ರಾಣವನ್ನು ಅಪಹರಣ ಮಾಡುವುದು ಮಹಾ ಪಾತಕವು. ನನಗೆ ನಶ್ವರವಾದ ಈ ರಾಜ್ಯಲಾಭವೂ ಬೇಡ, ಮಿಣುಕು ಹುಳುವಿಗಿಂತಲೂ ನಿಕೃಷ್ಟವಾಗಿರುವ ನಿರ್ಜೀವವಾದ ಆ ಕೋಹಿನೂರೂ ಬೇಡ; ಸತ್ಕೀರ್ತಿಯೇ ಚಕ್ರವರ್ತಿಯ ಪದವಿಗಿಂತಲೂ ಶ್ರೇಷ್ಠ ವಾದುದು. ಕಳಂಕವನ್ನು ಹೊಂದಿ ಅಷ್ಟೈಶ್ವರ್ಯವನ್ನು ಸಂಪಾದಿಸು ವುದಕ್ಕಿಂತಲೂ ಕೀರ್ತಿಯನ್ನು ಸಂಪಾದಿಸಿ ದರಿದ್ರನಾಗಿರುವುದೇ ಉತ್ತಮವು.

ಪ್ರಮದೆ.—ಅಷ್ಟೇ ಸರಿ! ಮತ್ತೇನು? ರಾಜಪುತ್ರರು ಕೊಟ್ಟ ವಚನವನ್ನು ತಪ್ಪತಕ್ಕವರು ಎಂಬ ಕಳಂಕವು ನಿಮ್ಮಿಂದಲೇ ಪ್ರಾರಂಭ ವಾಗಿ ನಿಮ್ಮ ವಂಶೀಯರಿಗೂ ವ್ಯಾಪಿಸಿದರೆ ನಿಮಗೆ ಬಹಳ ಸಂತೋಷ ವೇನೊ? ಇದಲ್ಲವೇ ನಿಮ್ಮ ಅಭಾವ ವೈರಾಗ್ಯ!

ಪತಿ.—ಕೇವಲ ಅಸ್ಥಿರವಾದ ದ್ರವ್ಯಾಶೆಗೊಳಪಟ್ಟು, ನಿರಪರಾ ಧಿಯೂ ಪರೋಪಕಾರಿಯೂ ಆದ ಮನುಷ್ಯನ ಪ್ರಾಣ ಹರಣ ಮಾಡುವ

ಇಂತಹ ನೀಚ ಕಾರ್ಯದಲ್ಲಿ ವಚನ ಭಂಗವಾದರೆ ಏನೂ ದೋಷವಿಲ್ಲ ವೆಂದು ಹಿಂದೆ ಹೇಳಿದೆನಷ್ಟೆ! ರಾಜಪುತ್ರರಿಗೆ ನನ್ನಿಂದಲೇ ಕಳಂಕವುಂಟಾ ಗುವುದೆಂದು ಹೇಳುವಿಯೊ? ಅದೂ ಇಲ್ಲ; ಏಕೆಂದರೆ, ಈ ಹಿಂದೆ ಕನೋಜಿನ ಅರಸನಾದ ಜಯಚಂದನು, ದೆಹಲಿಯ ರಾಜನಾಗಿದ್ದು ನಿರಪರಾಧಿಯಾದ ಪೃಥ್ವೀರಾಜನನ್ನು ಕೊಲ್ಲಿಸುವುದಕ್ಕಾಗಿಯೇ ಒಬ್ಬ ಯವನ ರಾಜನಿಗೆ ಯಾವಾಗ, ಅಂತರಂಗವಾಗಿ ಸಹಾಯಮಾಡಿದನೋ ಅಂದಿನಿಂದಲೂ ರಾಜಪುತ್ರ ಕುಲಕ್ಕೆ ಅಪವಾದವು ಬಂದೇ ಇರುವುದು. ನಾನು ಹೊಸದಾಗಿ ಏನೂ ಕಳಂಕವನ್ನು ತಂದ ಹಾಗಾಗುವುದಿಲ್ಲ.

ಪ್ರಮುದೆ.—ಇದನ್ನೆಲ್ಲ ನೋಡಿದರೆ ನೀವು ನಿಮ್ಮ ಮೊದಲಿನ ವಚನವನ್ನು ಸಂಪೂರ್ಣವಾಗಿ ಮರೆತಂತೆ ಕಾಣುವುದು.

ಪತಿ.—ಅದರಲ್ಲೇನೂ ಸಂಶಯವಿಲ್ಲ. ಅಷ್ಟೇ ಅಲ್ಲ, ನಾನು ಬಾಬರಷಹನೊಡನೆ ಸಖ್ಯವನ್ನು ಬೆಳೆಯಿಸಿ ಒಂದು ಉದ್ಯೋಗವನ್ನೂ ಕೈಕೊಂಡಿರುವೆನು.

ಪ್ರಮುದೆ.—(ಸಂತಾಪದೊಡನೆ) ಏನು? ಏನು? ಏನು ಹೇಳಿದಿರಿ!

ಪತಿ.—(ಶಾಂತ ರೀತಿಯಿಂದ) ನಾನು ಆ ಉದಾರ ಚರಿತನಾದ ಬಾಬರನ ಅಂಗರಕ್ಷಕನಾಗಿರುವೆನು.

ಪ್ರಮುದೆ.—ಹಾಗಾದರೆ ಇನ್ನೇನು? ಮುಸಲ್ಮಾನೀ ಧರ್ಮವನ್ನು ಸ್ವೀಕರಿಸುವುದೊಂದು ಉಳಿದಿರುವುದು. (ಸಂತಾಪಾತಿರೇಕದಿಂದ) ಆಗಲಿ, ಇಗೋ ನನ್ನ ಪ್ರತಿಜ್ಞೆ! ತಾವು ಯಾವ ವಚನವನ್ನು ಭಂಗಪಡಿಸಿ ದಿರೋ ಅದೇ ವಚನವನ್ನು ಪಾಲಿಸುವುದಕ್ಕೆ ತಮ್ಮ ಅರ್ಧಾಂಗಿಯಾದ ನನಗೆ ಅಧಿಕಾರವಿರುವುದರಿಂದ ನಾನು ಅದನ್ನು ಪಾಲಿಸುವೆನು.

ಪತಿ.—ಪ್ರಮುದಾ, ನಿನಗೇನು ಭ್ರಾಂತಿಯೊ? ಹುಚ್ಚು ಹಿಡಿ ಯಿತೊ?

ಪ್ರಮುದೆ.—ಸ್ವಲ್ಪ ಹಾಗೆಯೇ; ನೀವು ಹೇಗಾದರೂ ತಿಳಿದು ಕೊಳ್ಳಿರಿ. ನಾನು ರಾಜಪೂತ ಸ್ತ್ರೀಯೇ ಆಗಿದ್ದರೆ, ನನ್ನ ದೇಹದಲ್ಲಿ ಪವಿತ್ರವಾದ ಅಚ್ಚ ರಾಜಪೂತ ವಂಶದ ರಕ್ತವು ಪ್ರವಹಿಸುತ್ತಿದ್ದರೆ, ಆ

ಕೆಲಸವು ಪೂರಯಿಸುವ ವರೆಗೂ ನನ್ನ ಮುಖವನ್ನು ತಮಗೆ ತೋರಿಸುವುದಿಲ್ಲ, ತಾವೂ ನೋಡಕೂಡದು.

ಪತಿ.—(ಗಂಭೀರದಿಂದ) ಪ್ರಮದೆ! ಚೆನ್ನಾಗಿ ವಿಚಾರಿಸಿ ನೋಡು, ದುಡುಕಬೇಡ. ನಿನಗೆ ಸಿಟ್ಟು ಬಂದಿದೆಯೆಂದು ತಿಳಿದು ನಾನು ಹೆಚ್ಚು ಮಾತನ್ನು ಬೆಳಿಸುವುದಿಲ್ಲ, ನಿನ್ನ ಮಾತನ್ನು ಗಮನಿಸುವುದೂ ಇಲ್ಲ. ಈ ಕಾರ್ಯದಲ್ಲಿ ನೀನೆಂದಿಗೂ ಯಶಸ್ವಿನಿಯಾಗಲಾರೆ, ಇದು ನಿಶ್ಚಯ.

ಪ್ರಮದೆ.—ಒಳ್ಳೆಯದು, ನಾನು ನೋಡಿಕೊಳ್ಳುತ್ತೇನೆ.

ಪತಿ.—ನನ್ನ ಬುದ್ಧಿವಾದವನ್ನು ಇನ್ನೊಮ್ಮೆ ವಿಚಾರಮಾಡಿ ನೋಡು. "ಕೋಪದಲ್ಲಿ ಕೊಯ್ದ ಮೂಗು ಶಾಂತಿಯಲ್ಲಿ ಹತ್ತಲಾರದು." ದೇವರು ನಿನ್ನನ್ನು ಸುಖವಾಗಿಟ್ಟಿರಲಿ.

ಹೀಗೆಂದು ಹೇಳುತ್ತ ಆತನು ಹಿಂದಿರುಗಿ ಹೊರಟುಹೋದನು. ಪ್ರಮದೆಯು ಅದನ್ನು ಲಕ್ಷ್ಯಮಾಡದೆ ಬಾಗಿಲನ್ನು ಧಡಕ್ಕನೆ ಹಾಕಿ ಅಗಳಿಯನ್ನು ಹಾಕಿಬಿಟ್ಟಳು. ಪ್ರಯಾಣ ಹೋಗಿದ್ದ ಪತಿಯು ಹಿಂದಿರುಗಿ ಮನೆಗೆ ಬಂದಾಗ ಪತ್ನಿಯಿಂದ ತಕ್ಕ ಉಪಚಾರವು ದೊರೆತಿತು!

ಪ್ರಮದೆಯ ಪತಿಯು ಆನಂದಸಿಂಹನೆಂದು ವಾಚಕರಿಗೆ ಆಗಲೇ ತಿಳಿದಿರುವುದಲ್ಲವೆ? ಆನಂದಸಿಂಹನು ತನ್ನ ಮನೆಯಿಂದ ಹೊರಟು ಬೀದಿಗೆ ಬಂದನು. ಬಾಬರಷಹನು ಗಂಡ ಹೆಂಡತಿಯರಿಗೆ ನಡೆದ ಸಂಭಾಷಣವನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದು, ಆನಂದಸಿಂಹನು ಹೊರಗೆ ಹೊರಡುವ ಸಮಯವನ್ನರಿತು ತಾನೂ ಬೀದಿಯಲ್ಲಿ ಬಂದು ನಿಂತಿದ್ದನು. ಆನಂದಸಿಂಹನು, ತಾನು ಬಂದ ಕೂಡಲೆ, "ಕೇಳಿದಿರಾ? ಇನ್ನೊಂದು ಪ್ರತಿಬಂಧಕವುಂಟೆಂದು ನಾನು ಮೊದಲೇ ಹೇಳಿದ್ದೆನಷ್ಟೆ" ಎಂದನು. ಬಾಬರನು, "ನಿಜ, ನೀನು ಹೇಳಿದಂತೆಯೇ ಆಯಿತು; ಆದರೆ ನಿನ್ನ ಪತ್ನಿಯು ಬಹಳ ಹಠವಾದಿಯೆಂದು ಕಾಣುವುದು" ಎಂದನು.

ಆನಂದ.—ನಿಜ; ಆದರೆ ಅವಳು ಈ ಕಾರ್ಯದಲ್ಲಿ ಮಾತ್ರ ನಿಸ್ಸಂಶಯವಾಗಿ ದಾರಿ ತಪ್ಪಿ ಹೋಗುವಳು.

ಬಾಬರ.—(ನಗುತ್ತ) ಆಗಲಿ, ನಡೆಯಲಿ; ಇದರಲ್ಲೇನೂ ಅಂತಹ ಮಹತ್ವವಿಲ್ಲ.

ಆನಂದ.—ಆದರೆ ಅವಳ ಮನಸ್ಸು ತಿರುಗುವುದು ಹೇಗೆ? ನಿಜವಾದ ಜ್ಞಾನವು ಹೇಗೆ ಬರುವುದು?

ಬಾಬರ.—ಅದಕ್ಕೆಲ್ಲ ನಾನು ಇದ್ದೇನೆ, ನೀನು ಚಿಂತಿಸಬೇಡ; ಕೆಲವು ದಿನಗಳು ಕಳೆಯಲಿ.

ಆನಂದ.—ಆಮೇಲೆ ಏನು?

ಬಾಬರ.—ಆಮೇಲೆ ಎಲ್ಲವೂ ನಿನಗೇ ಗೊತ್ತಾಗುವುದು. ಯಾವ ರತ್ನಕ್ಕಾಗಿ ಆಕೆಯು ಈಗ ಇಷ್ಟು ಕೋಪಗೊಂಡಿರುವಳೋ ಆ ರತ್ನವನ್ನೇ ನಾನು ಸಂತೋಷದಿಂದ ಆಕೆಗೆ ಕೊಡುವೆನು. ಆಗ, ಪ್ರಾಣಹರಣವು ಒಳ್ಳೆಯದೊ, ಪ್ರಾಣಿ ದಯೆಯು ಒಳ್ಳೆಯದೊ ಎಂಬುದು ಆಕೆಗೆ ತಾನಾಗಿಯೇ ಸಿದ್ಧಾಂತವಾಗುವುದು. ಈಗ ಆಕೆಯು ತಾನು ಮುಂದೆ ಏನುಮಾಡಬೇಕಾಗಿದೆಯೋ ಆ ವಿಚಾರದಲ್ಲಿ ತೊಡಗಿರುವಳು; ಅದರಂತೆಯೇ ನಾವೂ ನಮ್ಮ ನಮ್ಮ ಕರ್ತವ್ಯವನ್ನು ಯೋಚಿಸಲು ಹೊರಡೋಣ.

ಹೀಗೆಂದು ಮಾತನಾಡುತ್ತ ಬಾಬರನೂ ಆನಂದಸಿಂಹನೂ ರಾಜಮಂದಿರದ ಕಡೆಗೆ ಹೊರಟುಹೋದರು.

## ಏಳನೆಯ ಪರಿಚ್ಛೇದ

ಏನಾಗಿಹೋಯಿತು ! ನಾನು ಕಂಡ ಸ್ವಪ್ನವು ನಿಜವಲ್ಲದೆ ಮತ್ತೇನು ? ಅವರು ನಿಜವಾಗಿಯೂ ಭಯಪಟ್ಟಿರುವರು. ಆದುದರಿಂದಲೇ, ಈ ನಡು ರಾತ್ರಿಯಲ್ಲಿ ಮುಚ್ಚುಮರೆಯಿಂದ ಯಾರಿಗೂ ಕಾಣದಂತೆ ಓಡಿಬಂದಿರುವರು ; ಆದರೆ ನಾನಾಡಿದ ಮಾತುಗಳು ಸ್ವಲ್ಪ ಮೀರಿ ದಪ್ಪಿದುವು ; ಅಂತಹ ಕಠೋರವಾದ ಮಾತುಗಳನ್ನಾಡಬಹುದೆ? ನನಗೇನೊ ದುಸ್ಸಹವಾದ ಕೋಪವು ಬಂದಿದ್ದಿತು. ಆದರೆ ಅದನ್ನು ಶಮನ ಮಾಡಿಕೊಳ್ಳಬಾರದಾಗಿದ್ದಿತೆ ? ಅವರು ಹೇಳಿದಂತೆ ಕೇಳಬಾರದಾಗಿದ್ದಿತೆ? ನಾನೇಕೆ ಕೇಳಲಿಲ್ಲ ? ಅವರಾಡಿದ ಮಾತುಗಳು ಯೋಗ್ಯವಾದುವುಗಳೇ ? ರಾಜಪುತ್ರ ಕುಲೋತ್ಪನ್ನರು ಹಾಗೆ ಭಯಪಡಲೇಕೆ ? ಏತಕ್ಕಾಗಿ ಅವರು ಈ ಕಾರ್ಯದಲ್ಲಿ ಹಿಂದಾಳಾದರು ? ಪ್ರಾಣಿ ಹತ್ಯೆಯು ಮಹಾ ಪಾತಕವೆಂಬುದೇನೊ ನಿಜ ; ಆದರೆ ದುಷ್ಟ ಪ್ರಾಣಿಗಳನ್ನೇಕೆ ಕೊಲ್ಲಬಾರದು ? ಹುಲಿ, ಸಿಂಹ ಮುಂತಾದ ಕ್ರೂರ ಮೃಗಗಳನ್ನು ಬೇಟೆ ಮಾಡಿ ಕೊಲ್ಲುವುದಿಲ್ಲವೆ? ಮನುಷ್ಯರಲ್ಲಿ ದುಷ್ಟರಿಲ್ಲವೇನು ? ಬೇಕಾದಷ್ಟು ಮಂದಿಯಿದ್ದಾರೆ; ಅಂಥವರನ್ನು ಕೊಂದರೆ ಪಾಪವೆಲ್ಲಿಯದು ? ಬಾಬರನು ದುಷ್ಟನೆ? ನನಗೇನು ಗೊತ್ತು? ನನ್ನ ಪ್ರಾಣಕಾಂತನು ಅವನು ಉತ್ತಮನೆಂದು ಹೇಳಿದನಲ್ಲವೆ! ಬಾಬರನು ಉತ್ತಮನೇ ಆಗಿರಬೇಕು ; ಇಲ್ಲದಿದ್ದರೆ ಅವರು ಭಯಪಡಲು ಕಾರಣವಿಲ್ಲ. ನಾನೇಕೆ ನಿಷ್ಠುರ ಮಾಡಿದೆನು ? ಕೋಪಾತಿಶಯದಿಂದ ಪತಿಯು ಒಂದು ವೇಳೆ ತಪ್ಪುದಾರಿಯಲ್ಲಿ ಹೋಗಿದ್ದರೂ, ನಾನು ಸಹಧರ್ಮಿಣಿಯಾಗಿದ್ದು ಇಂತಹ ನಿಷ್ಠುರ ವಾಕ್ಯಗಳನ್ನಾಡಬಹುದೆ? ಛೀ ! ಛೀ ! ಎಂದಿಗೂ ಸರಿಯಲ್ಲ. ಪತಿಯು ದುಸ್ಸಹಪಾಶಕ್ಕೆ ಕಟ್ಟುಬಿದ್ದು ಕೆಟ್ಟ ಮಾರ್ಗದಲ್ಲಿ ಹೋಗುತ್ತಿರುವ ಸಂದರ್ಭದಲ್ಲಿ ಆತನನ್ನು ಸಾಂತ್ವ ವಚನಗಳಿಂದ ಸನ್ಮಾರ್ಗಕ್ಕೆ ತರಬೇಕಲ್ಲದೆ ಕಠಿನ ವಾಕ್ಯಗಳನ್ನಾಡಬಾರದು ; ಇದರಿಂದ ಇನ್ನಷ್ಟು ಅಡ್ಡದಾರಿಗೇ ಬೀಳುವನು. ಈ ಬುದ್ಧಿಯು ನನಗೆ ಮೊದಲೇಕೆ ಬರಲಿಲ್ಲ? "ಕೋಪದಲ್ಲಿ ಕೊಯ್ದ ಮೂಗು...." ಎಂದು ಅವರು ಹೇಳಿದಾಗಲೇ ನಾನು ಸಮಾಧಾನವನ್ನು ತಂದುಕೊಳ್ಳಬೇಕಾಗಿದ್ದಿತು.

ನಾನು ಬಹಳ ತಪ್ಪು ಕೆಲಸವನ್ನು ಮಾಡಿದೆನು, ಬಹಳ ದುಡುಕಿದೆನು. ಇದರಿಂದ ನನ್ನ ಪ್ರಾಣ ಪ್ರಿಯನಿಗೆ ಬಹಳ ಕೋಪವು ಬಂದಿರಬಹುದು. ನಾನು ಬಹಳ ದುಷ್ಟಳು; ಕೋಪದ ಭರದಲ್ಲಿ ಏನೇನೋ ಹೇಳಿಬಿಟ್ಟೆನು. ಇದರ ಪರಿಣಾಮವು ಮುಂದೆ ಏನಾಗುವುದೊ? ಪತಿಯು ಬಾಬರನನ್ನು ಕೊಂದುಬಿಡಬೇಕೆಂದೇ ಹೊರಟುಹೋದರೊ ಏನೊ? ಕರ್ಮಧರ್ಮ ಸಂಯೋಗದಿಂದ ಈ ಸಂಧಿಯಲ್ಲಿ ನನ್ನ ಪತಿಯು ರಾಜ್ಯ ಶಾಸನಾಧಿಕಾರಿಗಳ ಕೈಗೆ ಸಿಕ್ಕಿಬಿದ್ದರೆ ಆತನ ಗತಿಯೇನು? ಬಾಬರನು ಎಷ್ಟೇ ಉದಾರಿಯಾದರೂ, ತನ್ನನ್ನೇ ಕೊಲ್ಲಲು ಬಂದ ಶತ್ರುವನ್ನು, ಅದರಲ್ಲಿಯೂ ಹಿಂದೂ ಮತದವನನ್ನು, ಸುಮ್ಮನೆ ಬಿಟ್ಟು ಬಿಡುವನೆ? ತೋಫಿನ ಬಾಯಿಗೆ ಆಹುತಿಕೊಡುವನು! ಅಯ್ಯೋ! ಆಮೇಲೆ ಏನು? ಕಂಡೇ ಇದೆ, ನನಗೆ ವೈಧವ್ಯ ಪ್ರಾಪ್ತಿ! ಛೀ! ಛೀ! ಹಾಗೆಂದಿಗೂ ಆಗದಿರಲಿ. ನಾನು ಆಕಾಶ ಪಾತಾಳಗಳನ್ನು ಇಷ್ಟೆಲ್ಲ ಗಂಟುಹಾಕಿದ್ದುದು ಏತಕ್ಕಾಗಿ? ಆ ಕೋಹಿನೂರಿಗಾಗಲ್ಲವೆ? ಅದೊಂದು ಪ್ರಕಾಶಮಾನವಾದ ಕಲ್ಲು! ಆ ಕಲ್ಲಿಗಾಗಿ ಆಶೆಪಟ್ಟು ರಾಣಿಯಾಗುವುದಕ್ಕೆ ಬದಲಾಗಿ ವಿಧವೆಯಾಗಲೆ? ಅನ್ಯಾಯ! ಧಿಕ್ಕಾರ! ಆ ಕಲ್ಲಿಗಿಂತಲೂ ಅನಂತಾನಂತವಾದ ಬೆಲೆಯುಳ್ಳ ನನ್ನ ಜೀವ ರತ್ನವನ್ನು ಮಣ್ಣುಪಾಲು ಮಾಡುವುದೆ? ಅಯ್ಯೋ! ನನ್ನ ವಿಚಾರ ಶಕ್ತಿಯು ನಾಶವಾಗಿ ಹೋಯಿತು. ಪತಿಯು ದೇವರೆಂದೇ ತಿಳಿದು, ಆತನನ್ನು ಸರ್ವ ವಿಧದಲ್ಲಿಯೂ ಸಂತೋಷಪಡಿಸುವುದೇ ಪ್ರತಿಯೊಬ್ಬ ಸತಿಯ ಕರ್ತವ್ಯವು. ದಂಪತಿಗಳು ಈಶ್ವರ ಸಾಕ್ಷಿಯಾಗಿ ಅನ್ಯೋನ್ಯ ಪ್ರೀತಿಯನ್ನು ನಿರ್ವಂಚನೆಯಿಂದ ತೋರಿಸುತ್ತ ಆ ಸರ್ವೇಶ್ವರನ ಕೃಪೆಗೆ ಪಾತ್ರರಾಗುವಂತಹ ಸತ್ಕರ್ಮಗಳನ್ನಾಚರಿಸಿ, ತನ್ಮೂಲಕ ಜನ್ಮವನ್ನು ಸಾರ್ಥಕಗೊಳಿಸಬೇಕಾದುದೇ ಅವರ ಮುಖ್ಯ ಕರ್ತವ್ಯವು. ಇದನ್ನು ನಾನು ತಿಳಿದೂ ತಿಳಿದೂ ಮೂರ್ಖಳಾದೆನಲ್ಲವೆ? ನನ್ನ ಜನ್ಮಕ್ಕೆ ಧಿಕ್ಕಾರ! ಭಗವಂತನಿಂದ ಸೃಷ್ಟಿಯಾದ ಪ್ರತಿಯೊಂದು ಪ್ರಾಣಿಯೂ ಒಂದಕ್ಕೊಂದು ಸಹಾಯಮಾಡಬೇಕಲ್ಲದೆ, ಒಬ್ಬನನ್ನು ಇನ್ನೊಬ್ಬನು ನಿಷ್ಕಾರಣವಾಗಿ ಕೊಲ್ಲುವುದೆಂದರೇನು? ರಾಕ್ಷಸ ಕೃತ್ಯ! ಪೈಶಾಚಿಕ ಕರ್ಮ!

ಈ ರೀತಿಯಾಗಿ ಪ್ರಮದಾ ಕುಮಾರಿಯು ಇಷ್ಟಾನಿಷ್ಟ, ಯೋಗ್ಯಾಯೋಗ್ಯ ವಿಚಾರಗಳಲ್ಲಿ ಮಗ್ನಳಾಗಿ ಹಂಬಲಿಸುತ್ತಿರುವಷ್ಟರಲ್ಲಿಯೇ ಕೋಳಿ ಕೂಗಿತು. ಬೆಳಗಾಗುತ್ತಲೆ, ಪ್ರಮದೆಯು ಹಾಸಿಗೆಯಿಂದೆದ್ದು ಪ್ರಾತರ್ವಿಧಿಗಳನ್ನು ನೆರವೇರಿಸಲು ಹೊರಟುಹೋದಳು; ಹಿಂದಿರುಗಿ ಬರುವಷ್ಟರಲ್ಲಿ ರಂಗೀಲಾಲನು ಎಚ್ಚತ್ತಿದ್ದನು. ಪ್ರಮದೆಯು ಮಗುವನ್ನೆತ್ತಿಕೊಂಡು ಹಾಸಿಗೆಯನ್ನು ಸುತ್ತಿ ಬೇರೆ ಕಡೆಗೆ ತೆಗೆದಿಟ್ಟು, ಮಗುವಿಗೆ ಮುಖ ತೊಳೆದು, ಸ್ವಲ್ಪ ಹಾಲನ್ನು ಬಿಸಿ ಮಾಡಿ ಸಕ್ಕರೆ ಬೆರಸಿ ಅವನಿಗೆ ಕುಡಿಯಲು ಕೊಟ್ಟಳು. ರಂಗೀಲಾಲನು ಹಾಲನ್ನು ಕುಡಿದು ಹೊರಗೆ ಆಡುವುದಕ್ಕಾಗಿ ಹೊರಟುಹೋದನು. ಪ್ರಮದೆಗೆ ರಾತ್ರಿಯೆಲ್ಲ ಪತಿಯ ವಿಷಯವಾದ ಆಲೋಚನೆಗಳಿಂದ ನಿದ್ದೆ ಬಾರದಿದ್ದುದರಿಂದ ಮನಸ್ಸು ನೆಮ್ಮದಿಯಾಗಿರಲಿಲ್ಲ; ಪತಿಯು ಎಲ್ಲಿಗೆ ಹೋದನು? ಆತನನ್ನು ಹುಡುಕುವುದೆಲ್ಲಿ? ನಾನು ಮಾಡಿದ ಶಪಥವೇನು? ಇತ್ಯಾದಿ ಆಲೋಚನೆಗಳಲ್ಲಿ ಮಗ್ನಳಾಗಿ ಹಾಗೂ ಹೀಗೂ ಮನೆಗೆಲಸವನ್ನು ಮಾಡುತ್ತಿದ್ದಳು. ಹೊರಗೆ ಆಡುತ್ತಿದ್ದ ಬಾಲಕನು ದುಡು ದುಡು ಓಡಿಬಂದು, "ಅಮ್ಮಾ, ಹೊರಗೆ ಯಾರೋ ಬಂದಿದ್ದಾರೆ" ಎಂದು ಹೇಳಿದನು. ಪ್ರಮದೆಯು, "ಯಾರಿರಬಹುದು? ಅವರೇ ಬಂದಿರಬಹುದೆ? ಹಾಗಿದ್ದರೆ ಮಗುವು ಹೀಗೆ ಹೇಳುತ್ತಿರಲಿಲ್ಲ" ಎಂದು ಹೊರಗೆ ಬಂದು ನೋಡುವಲ್ಲಿ, ಒಬ್ಬ ವೃದ್ಧಳು ಐದು ವರ್ಷದ ಸುಂದರಿಯಾದೊಬ್ಬ ಹುಡುಗಿಯನ್ನು ಸಂಗಡ ಕರೆದುಕೊಂಡು ಬಂದು ನಿಂತಿದ್ದಳು. ಪ್ರಮದೆಯು ಅವರನ್ನು ನೋಡಿ, "ಅಮ್ಮಾ, ನೀವು ಯಾರು? ಏನು ಬಂದಿರಿ" ಎಂದು ಕೇಳಿದಳು.

ಮುದುಕಿ.—ಆನಂದಸಿಂಹನ ಮನೆಯು ಇದೇಯೋ?

ಪ್ರಮದೆ.—ಅಹುದು; ಏಕೆ?

ಮುದುಕಿ.—ಸರಿ, ನಾನು ದಾರಿ ತಪ್ಪಿದ ಹಾಗಾಗಲಿಲ್ಲ; ಮನೆಗೇ ಬಂದಂತಾಯಿತು. (ಹುಡುಗಿಯನ್ನು ನೋಡಿ) ಪೋರೀ, ಒಳಗೆ ನಡೆ; ನಿನಗೆ ಹಸಿವೂ ಆಯಾಸವೂ ಆಗಿರಬಹುದು. ಇಗೋ! ನಿಮ್ಮ ಚಿಕ್ಕ

ಮ್ಮನು ಇಲ್ಲಿಯೇ ನಿಂತಿರುವಳು, ನಿನಗೇನಾದರೂ ತಿನ್ನುವುದಕ್ಕೆ ಕೊಡುತ್ತಾಳೆ.

ಹೀಗೆಂದು ಹೇಳುತ್ತ ಮುದುಕಿಯು ಮನೆಯೊಳಗೆ ಹೋದಳು. ಆಕೆಯು ತಡಬಡವಿಲ್ಲದೆ ಒಳಗೆ ಬಂದುದನ್ನು ನೋಡಿ ಪ್ರಮದೆಯು ಆಶ್ಚರ್ಯ ಚಕಿತಳಾದಳು; ಅಲ್ಲಿ ಹಾಸಿದ್ದ ಒಂದು ಜಮಖಾನೆಯ ಮೇಲೆ ಕುಳಿತುಕೊಳ್ಳಿರೆಂದು ನಿರ್ವಾಹವಿಲ್ಲದೆ ಹೇಳಬೇಕಾಯಿತು. ಮುದುಕಿಯು ಕುಳಿತುಕೊಂಡು, "ಅಮ್ಮಾ, ಆನಂದಸಿಂಹನು ಎಲ್ಲಿಗೋ ಕಾರ್ಯಾರ್ಥವಾಗಿ ಹೋಗಿರುವನೇನು?" ಎಂದು ಹೇಳುತ್ತ ರಂಗೀಲಾಲನನ್ನು ನೋಡಿ, "ಇವನು ನಿಮ್ಮ ಮಗನಲ್ಲವೆ? ಬಾ, ಎಲೋ ಪೋರ! ಇಲ್ಲಿ ಬಾ!" ಎಂದು ಕರೆದಳು. ಮುದುಕಿಯ ಪರಿಚಯವಿಲ್ಲದುದರಿಂದ ಆ ಬಾಲಕನು ಒಂದು ಸಲ ತಾಯಿಯನ್ನೂ ಇನ್ನೊಂದು ಸಲ ಆ ಮುದುಕಿಯನ್ನೂ ನೋಡುತ್ತ ಸುಮ್ಮನೆ ನಿಂತು ಕೊಂಡಿದ್ದನು. ಪ್ರಮದೆಯಂತೂ ಮತ್ತಷ್ಟು ಆಶ್ಚರ್ಯ ಭರಿತಳಾದಳು. ಈ ಸಂದರ್ಭವನ್ನರಿತು ಮುದುಕಿಯು, "ಅಮ್ಮಾ, ನಿನಗೆ ನನ್ನ ಗುರುತು ಹತ್ತಲಾರದು; ನಿನ್ನ ಗಂಡನೂ ನನ್ನನ್ನು ಗುರುತು ಹಿಡಿಯುವನೋ ಇಲ್ಲವೊ? ಇಲ್ಲಿ ಬಾ, ಸಂದೇಹ ಪಡಬೇಡ, ಎಲ್ಲವನ್ನೂ ಹೇಳುವೆನು" ಎಂದಳು. ಪ್ರಮದೆಯು ಮಗುವನ್ನು ಕರೆದುಕೊಂಡು ಮುದುಕಿಯ ಬಳಿಗೆ ಬಂದು ಕುಳಿತಳು. ಮುದುಕಿಯ ವಯಸ್ಸು ಐವತ್ತರ ಮೇಲಿರ ಬಹುದು; ವೃದ್ಧಾಪ್ಯದ ಕುರುಹುಗಳೆಲ್ಲವೂ ಆಕೆಯಲ್ಲಿ ತೋರಿಬರುತ್ತಿದ್ದುವು; ಆದರೆ ದೇಹದಲ್ಲಿ ಬಲವೂ, ಮುಖದಲ್ಲಿ ವರ್ಚಸ್ಸೂ ಮಾತ್ರ ಕಡಿಮೆಯಾಗಿರಲಿಲ್ಲ. ಮುದುಕಿಯು ರಂಗೀಲಾಲನನ್ನು ಎತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಿಟ್ಟು, "ಎಲೋ ಪೋರ, ನಿನ್ನ ಹೆಸರೇನೊ? ಇನ್ನುಮೇಲೆ ಈ ಹುಡುಗಿಯ ಸಂಗಡ ನೀನು ಆಟವಾಡಿ ಕೊಳ್ಳಬೇಕು, ತಿಳಿಯಿತೋ? ನಿನ್ನ ಹೆಸರೇನು ಹೇಳು" ಎಂದಳು. ಹುಡುಗನು ತಾಯಿಯ ಮುಖವನ್ನು ನೋಡಿದನು. ತಾಯಿಯು, "ಅವನ ಹೆಸರು ರಂಗೀಲಾಲ" ಎಂದಳು.

ಮುದುಕಿ.—ಬಹು ಮುದ್ದಾದ ಹೆಸರು. ರಂಗೀಲಾಲ! ನಮ್ಮ

ಹುಡುಗಿಯ ಸಂಗಡ ಆಡುವುದಕ್ಕೆ ಹೋಗು. (ಹುಡುಗಿಯನ್ನು ನೋಡಿ) ಮಗೂ! ನೀನೂ ಹೋಗು; ಇಬ್ಬರೂ ಆಡಿಕೊಳ್ಳಿರಿ.

ಪ್ರಮದೆ.—ಹುಡುಗಿಗೆ ಹಸಿವಾಗಿರಬಹುದು; ತಿನ್ನುವುದಕ್ಕೆ ಏನಾದರೂ ಕೊಡುವೆನು.

ಹೀಗೆಂದು ಹೇಳಿ ಪ್ರಮದೆಯು ಎದ್ದುಹೋಗಿ ಇಬ್ಬರಿಗೂ ತಿನ್ನು ವುದಕ್ಕೆ ತಂದುಕೊಟ್ಟಳು. ಹುಡುಗಿಯೂ ಹುಡುಗನೂ ಆಟವಾಡಲು ಹೊರಟುಹೋದರು.

ಮುದುಕಿ.—ಅಮ್ಮಾ, ಕುಳಿತುಕೊ; ನನ್ನ ವಿಷಯವೆಲ್ಲವನ್ನೂ ಹೇಳುವೆನು: ನಾನು ನಿಮ್ಮ ಸಮೀಪದ ಬಂಧುವು; ನನ್ನ ಪತಿಯೂ ನಿನ್ನ ಮಾವಂದಿರೂ ಏಕೋದರರು. ಅವರಿಬ್ಬರೂ ಒಂದೇ ಕಡೆಯಲ್ಲಿ ವಾಸವಾಗಿದ್ದರು. ಚಿತ್ತೂರಿನ ಕೋಟೆಯಲ್ಲಿರುವಾಗ, ಚಿತ್ತೂರಿನ ರಾಜನಿಗೂ ನಿಮ್ಮ ಮಾವನಿಗೂ ಮನಸ್ತಾಪವುಂಟಾಗಿ ರಾಜನು ನಿಮ್ಮ ಮಾವನನ್ನು ಸೈನ್ಯದಲ್ಲಿದ್ದ ನೌಕರಿಯಿಂದ ತೆಗೆದುಹಾಕಿದನು. ಆದುದ ರಿಂದ ಅವನು ಹೆಂಡಿರು ಮಕ್ಕಳೊಡನೆ ಮಾಳವ ಪ್ರಾಂತಕ್ಕೆ ಹೊರಟು ಹೋದನು. ಆಗ ನಿನ್ನ ಪತಿಯಾದ ಆನಂದನು ಎರಡು ವರ್ಷದ ಮಗು. ಕೆಲವು ದಿವಸಗಳಲ್ಲಿಯೇ ಒಂದು ಯುದ್ಧವು ಸಂಘಟಿಸಿ, ಅದರಲ್ಲಿ ನಿಮ್ಮ ಮಾವನು ಮೃತಪಟ್ಟನು. ನಿಮ್ಮ ಅತ್ತೆಯು ಎರಡು ವರ್ಷದ ತನ್ನ ಮಗುವನ್ನು ಕರೆದುಕೊಂಡು ಎಲ್ಲಿಗೋ ಹೊರಟುಹೋದಳು. ನಮ್ಮ ಬಳಿಗೆ ಬರಬಹುದಾಗಿದ್ದಿತು; ಆದರೆ ಬರಲಿಲ್ಲ. ನನಗೂ ಆನಂದ ಸಿಂಹನ ಸಮವಯಸ್ಕನಾದ ಒಬ್ಬ ಮಗನಿದ್ದನು. ಅವನೂ ಶಿಪಾ ಯಿಯ ಕೆಲಸದಲ್ಲಿದ್ದು ಈಚೆಗೆ ಯುದ್ಧದಲ್ಲಿ ಮೃತಿಹೊಂದಿದನು. ಅಯ್ಯೋ! ಪುತ್ರ ಶೋಕವನ್ನೆಂತು ಸಹಿಸಲಿ? ನನ್ನ ಹಣೆಯಲ್ಲಿ ಈ ರೀತಿ ಯಾಗಿ ಬರೆದಿದ್ದಿತು. (ಮುದುಕಿಯ ಕಣ್ಣಿನಿಂದ ಅಶ್ರುಧಾರೆಯು ಸುರಿದು ಕಂಠವು ಗದ್ಗದಿತವಾಯಿತು.) ಸೊಸೆಯಾದರೋ ತನ್ನ ಸತೀಧರ್ಮಕ್ಕನುಸಾರವಾಗಿ ಸಹಗಮನ ಮಾಡಿಬಿಟ್ಟಳು. ತಾಯಿ ತಂದೆಗಳನ್ನು ಕಳೆದುಕೊಂಡ ಈ ಬಾಲಿಕೆಯನ್ನು....ಅಯ್ಯೋ! ಇನ್ನು ಹೇಳಲಾರೆನು. (ದೀರ್ಘ ನಿಶ್ವಾಸ

ದಿಂದ) ಇವಳನ್ನು ಸಂರಕ್ಷಿಸುವ ಭಾರವು ನನ್ನ ತಲೆಯ ಮೇಲೆ ಬಿದ್ದಿತು. ಎಷ್ಟು ಅತ್ತರೇನು? ಏನು ಮಾಡಿದರೇನು? ಸತ್ತವರು ಹಿಂದಿರುಗಿ ಬರುವರೆ? ಹಾಗೂ ಹೀಗೂ ನನ್ನ ದುಃಖವನ್ನು ನಾನೇ ನುಂಗಿಕೊಂಡು, ಅನಾಥಳಾದ ಈ ಬಾಲಿಕೆಯನ್ನು ಕರೆದುಕೊಂಡು ಹೋಗಿ ಕೆಲವು ದಿವಸ ಚಿತ್ತೂರುಗಡದಲ್ಲಿ ವಾಸವಾಗಿದ್ದೆನು; ದೆಹಲಿಯ ಪಟ್ಟಣವು ಬಹುದೊಡ್ಡದೆಂದೂ ವಾಸಕ್ಕೆ ಅನುಕೂಲವೆಂದೂ ಕೇಳಿ, ನನ್ನಲ್ಲಿ ಸಂಗ್ರಹಿಸಿಟ್ಟುಕೊಂಡಿದ್ದ ಅಲ್ಪಸ್ವಲ್ಪ ಹಣವನ್ನು ಕೈಯಲ್ಲಿ ತೆಗೆದುಕೊಂಡು ಹೊರಡಲು ಆಲೋಚಿಸಿದೆನು. ಅಷ್ಟರಲ್ಲಿಯೇ ಮೊನ್ನೆ ನಡೆದ ಪಾಣಿಪತ್ತದ ಘೋರ ಯುದ್ಧವು ಆರಂಭವಾದುದರಿಂದ ಆಗಲೇ ಹೊರಡದೆ ಯುದ್ಧವು ಶಾಂತವಾದ ಮೇಲೆ ಇತ್ತ ಕಡೆಗೆ ಹೊರಟು ಬಂದೆನು. ಮಾರ್ಗದಲ್ಲಿ ಅಕಸ್ಮಾತ್ತಾಗಿ ನಿಮ್ಮ ಜ್ಞಾಪಕವು ತಲೆದೋರಿ, ನೀವು ಎಲ್ಲಿರುವಿರಿ? ಯಾರು ಯಾರು ಇರುವಿರಿ? ಎಂದು ವಿಚಾರಿಸುತ್ತ ಬಂದೆನು. ಮಧ್ಯ ಮಾರ್ಗದಲ್ಲಿ ನನಗೆ ಪ್ರಬಲವಾದ ರೋಗವು ಸಂಭವಿಸಿತು. ಯಾರೋ ಒಬ್ಬ ಪುಣ್ಯಾತ್ಮನು ದಾರಿಯಲ್ಲಿ ಅಕಸ್ಮಾತ್ ಸಹಾಯಕನಾಗಿ, ನನ್ನ ಮಗನಂತೆ ನನ್ನ ಶುಶ್ರೂಷೆಯನ್ನು ಮಾಡಿದನು. ಆ ಮಹಾತ್ಮನಿಗೆ ಅನಂತಾಯುಷ್ಯವೂ ಸಕಲೈಶ್ವರ್ಯಗಳೂ ಲಭಿಸಲಿ. ನನ್ನ ರೋಗವು ವಾಸಿಯಾದ ಮೇಲೆ ನಿಮ್ಮನ್ನು ಪುನಃ ಹುಡುಕುತ್ತ ಬಂದೆನು. ಈ ದಿವಸ ನಿಮ್ಮ ಸಂದರ್ಶನವಾಯಿತು. ನನಗೆ ನಿಮ್ಮ ಹೊರತು ಅನ್ಯರು ಯಾರೂ ದಿಕ್ಕಿಲ್ಲ. ನನ್ನನ್ನೂ ಈ ಚಿಕ್ಕ ಬಾಲಿಕೆಯನ್ನೂ ಕಾಪಾಡುವ ಭಾರವು ನಿಮ್ಮನ್ನೇ ಕೂಡಿದೆ; ಉದಾಸೀನರಾಗಬೇಡಿರಿ.

ಹೀಗೆಂದು ಹೇಳಿ ಮುದುಕಿಯು ಗಟ್ಟಿಯಾಗಿ ಅಳುವುದಕ್ಕೆ ಪ್ರಾರಂಭಿಸಿದಳು. ಪ್ರಮದೆಯು ಈ ಚರಿತ್ರೆಯನ್ನೆಲ್ಲ ಕೇಳಿ ತಾನೂ ಬಹಳ ವ್ಯಸನಪಟ್ಟಳು. ಆಮೇಲೆ ತನ್ನ ದೊಡ್ಡ ಅತ್ತೆಗೆ ನಮಸ್ಕಾರ ಮಾಡಿ, "ಅತ್ತೆಮ್ಮನವರೇ, ನೀವು ಬಂದುದರಿಂದ ನನಗುಂಟಾಗಿರುವ ಆನಂದವನ್ನು ಎಷ್ಟೆಂದು ಹೇಳಲಿ! ಈ ಮನೆಯು ನಿಮ್ಮದೇ ಆಗಿರುವುದು. ನೀವೇ ಯಜಮಾನಿಯಾಗಿದ್ದುಕೊಂಡು ನನ್ನನ್ನು ಮಗಳಂತೆ ಸಲಹಬೇಕು. ನನಗೂ ಹಡೆದ ತಾಯಿಯಿಲ್ಲ; ನೀವು ನಮ್ಮ ತಾಯಿಯಂತೆಯೇ

ಇರುವಿರಿ. ದೀನಳಾದ ನನ್ನನ್ನು ಕರುಣಿಸಿ ಭಗವಂತನು ನಿಮ್ಮನ್ನು ಇಲ್ಲಿಗೆ ಕಳುಹಿಸಿರುವನು. ನೀವು ಯಾವ ವಿಧದಲ್ಲಿಯೂ ಸಂಕೋಚ ಪಟ್ಟುಕೊಳ್ಳಬೇಡಿರಿ'' ಎಂದಳು. ಮುದುಕಿಯು ಅತ್ಯಾದರದಿಂದ ಪ್ರಮದೆಯ ತಲೆಯ ಮೇಲೆ ಕೈಯಿಟ್ಟು ಆಶೀರ್ವಾದ ಮಾಡುತ್ತ, ''ನೀನು ಚಿರ ಕಾಲ ಸೌಮಂಗಲ್ಯವತಿಯಾಗಿರು ; ನಿನ್ನ ಪತಿಗೆ ಭಗವಂತನು ಅಷ್ಟೈಶ್ವರ್ಯವನ್ನು ದಯಪಾಲಿಸಲಿ. ಒಳ್ಳೆಯದು, ಆನಂದಸಿಂಹನು ಎಲ್ಲಿಗೆ ಹೋಗಿರುವನು? ಯಾವಾಗ ಬರುವನು?'' ಎಂದು ಪುನಃ ಕೇಳಿದಳು. ಪ್ರಮದೆಯು ಬಹು ಆತಂಕಕ್ಕೆ ಸಿಕ್ಕಿದಳು; ಅವಳು ಹೇಳುವುದೇನು? ತಾನು ಮಾಡಿದ ಅಪರಾಧದಿಂದಲೇ ಈ ರೀತಿಯಾಯಿ ತೆಂದು ಹೇಳಬಹುದೊ? ಹಾಗೆ ಏಕಾಏಕಿ ನಿಶ್ಚಯವನ್ನೇ ಹೇಳಿ ಬಿಡುವುದು ಸಾಮಾನ್ಯವಾಗಿ ಸ್ತ್ರೀ ಸಮುದಾಯದಲ್ಲಿ ಅಪೂರ್ವ. ಹೀಗೆ ನಿಶ್ಚಯವನ್ನು ಹೇಳದೆ ಮುಚ್ಚಿಟ್ಟುಕೊಳ್ಳುವುದರಿಂದ ಮುಂದೆ ತನಗುಂಟಾಗಬಹುದಾದ ಪರಿಣಾಮವೇನೆಂಬುದನ್ನು ಅವರು ಯೋಚಿ ಸುವುದೇ ಇಲ್ಲ. ಪ್ರಮದೆಯು ತನ್ನ ಮನಸ್ಸಿನಲ್ಲಿ, ತನ್ನ ಪತಿಯು ರಂಗೀಲಾಲನನ್ನು ನೋಡುವ ಕುತೂಹಲದಿಂದಲಾದರೂ ಒಂದೆರಡು ದಿನಗಳಲ್ಲಿಯೇ ಹಿಂದಿರುಗಿ ಬಂದೇ ಬರುವನೆಂದೂ, ಬಹಳ ದಿವಸ ಬೇರೆ ಸ್ಥಳದಲ್ಲಿರಲಾರನೆಂದೂ ತಿಳಿದು, ''ಅವರು ಇಲ್ಲಿಯೇ ಹಳ್ಳಿಯ ಕಡೆಗೆ ಹೋಗಿರುತ್ತಾರೆ, ಒಂದೆರಡು ದಿನಗಳಲ್ಲಿಯೇ ಬರಬಹುದು'' ಎಂದು ಕೂಡಲೆ ಸುಳ್ಳೊಂದನ್ನು ಹೇಳಿಬಿಟ್ಟಳು. ಈ ಸಂಗತಿಗಳು ಯಾವುವನ್ನೂ ಅರಿಯದ ಮುದುಕಿಯು, ಇರಬಹುದೆಂದುಕೊಂಡಳು. ಒಂದು ದಿನ, ಎರಡು ದಿನ, ಮೂರು ದಿನ, ಹೀಗೆ ಏಳು ದಿನಗಳು ಕಳೆದು ಹೋದುವು; ಆನಂದಸಿಂಹನು ಬೇರೆ ಬರಲಿಲ್ಲ. ಪ್ರತಿ ದಿನವೂ ಮುದುಕಿಯು ಕೇಳುತ್ತಲೇ ಇದ್ದಳು; ಪ್ರತಿ ದಿನವೂ ಪ್ರಮದೆಯು ಒಂದೊಂದು ಸುಳ್ಳು ನೆಪವನ್ನು ಹೇಳುತ್ತಲೇ ಇದ್ದಳು.

ಮುದುಕಿಯು ಪದೇ ಪದೇ ಪೀಡಿಸುವುದಕ್ಕೆ ಪ್ರಾರಂಭಿಸಿದುದ ರಿಂದಲೂ, ತನ್ನ ಪತಿಯು ಎಂಟು ದಿನವಾದರೂ ಬಾರದೆ ಇದ್ದುದ ರಿಂದಲೂ ಪ್ರಮದೆಯು ನಿಶ್ಚಯಾಂಶವನ್ನು ಹೇಳಲೇಬೇಕಾಯಿತು

ಒಂದು ದಿನ ಎಂದಿನಂತೆ ಮುದುಕಿಯು ಪ್ರಶ್ನೆಮಾಡಿದಾಗ ಪ್ರಮದೆಯು, "ಅಮ್ಮಾ, ಈಗ ನಿಜವನ್ನೇ ಹೇಳುತ್ತೇನೆ ಕೇಳಿ" ಎಂದು ಪ್ರಾರಂಭಿಸಿ, ತನಗೂ ತನ್ನ ಪತಿಗೂ ನಡೆದ ವಾಗ್ವಾದವನ್ನೆಲ್ಲ ಆಮೂಲಾಗ್ರವಾಗಿ ಹೇಳಿಬಿಟ್ಟಳು. ತರುವಾಯ, "ತಾಯಿ! ನನ್ನ ಅಪವಚನಗಳಿಂದಲೇ ಅವರು ಗೃಹವನ್ನು ತ್ಯಾಗಮಾಡಿದರಲ್ಲವೆ? ಅವರು ಎಲ್ಲಿದ್ದರೂ ಸರಿಯೆ, ನಾನೇ ಹುಡುಕಿ ಕರೆದುಕೊಂಡು ಬರುವೆನು. ಇದುವರೆಗೂ ನನಗೆ ಮಗುವಿನ ಯೋಚನೆಯೊಂದು ಬಲವಾಗಿದ್ದಿತು; ನೀವು ಬಂದಿರುವುದರಿಂದ ಆ ಯೋಚನೆಯೂ ಈಗ ನನಗಿಲ್ಲ. ಚಂಪಕೆಯೊಡನೆ ರಂಗೀಲಾಲನು ಆಟಪಾಟಗಳನ್ನಾಡಿಕೊಂಡಿರುವನು; ನೋಡಿಕೊಳ್ಳುವುದಕ್ಕೆ ನೀವಿದ್ದೀರಿ; ಆದುದರಿಂದ ನಾನು ಅವನನ್ನು ಬಿಟ್ಟುಹೋಗುವುದಕ್ಕೆ ಯಾವ ಚಿಂತೆಯೂ ಇಲ್ಲ; ಹೋಗಿಬರುವುದಕ್ಕೆ ಅಪ್ಪಣೆಯನ್ನು ಕೊಡಿರಿ" ಎಂದು ಕೇಳಿದಳು.

ಮುದುಕಿಯು, "ಪ್ರಮದಾ ಕುಮಾರೀ! ನಿನಗೇನು ಹುಚ್ಚು ಹಿಡಿಯಿತೊ ಏನು? ನೀನು ಪ್ರಾಯದವಳು, ಮೇಲಾಗಿ ರೂಪವತಿ. ನಿನ್ನ ಪತಿಯು ಇಂತಹ ಸ್ಥಳದಲ್ಲಿಯೇ ಇರುವನೆಂಬುದು ನಿನಗೆ ತಿಳಿಯದು. ಹೀಗಿರುವಲ್ಲಿ ನೀನೆಂತು ಆತನನ್ನು ಹುಡುಕುವೆ? ಅಸಾಧ್ಯ! ಬೇಡ! ಈ ಆಲೋಚನೆಯನ್ನು ಬಿಟ್ಟುಬಿಡು. ನಿನ್ನ ಪತಿಯು ಈ ದಿನವಿಲ್ಲದಿದ್ದರೆ ಎಂದಾದರೂ ಬರಲಿ; ಪ್ರಾಯಸ್ಥರಾದ ಸುಂದರಿಯರು ಇತರರ ಆಶ್ರಯವಿಲ್ಲದೆ ಹೀಗೆ ಕಂಡಕಂಡ ಕಡೆ ತಿರುಗುವುದುಂಟೇ? ನಿಜವಾಗಿಯೂ ಹೋಗಬೇಡ" ಎಂದು ಹೇಳಿದಳು. ಆದರೂ ಪ್ರಮದೆಯು ತಾನು ಹಿಡಿದ ಹಠವನ್ನು ಬಿಡಲಿಲ್ಲ. ನಿರ್ವಾಹವಿಲ್ಲದೆ ಮುದುಕಿಯು ಅಪ್ಪಣೆಕೊಡಬೇಕಾಯಿತು. ಒಂದು ದಿನ ಬೆಳಗ್ಗೆ ಪ್ರಮದೆಯು ಮುಂಚಿತವಾಗಿಯೇ ಎದ್ದು ಮುಖಮಜ್ಜನಾದಿಗಳನ್ನು ತೀರಿಸಿಕೊಂಡು ಮನೆ ದೇವರಿಗೆ ನಮಸ್ಕರಿಸಿ, ಪ್ರಯಾಣಕ್ಕೆ ಬೇಕಾದ ಸಲಕರಣೆಗಳನ್ನು ತೆಗೆದುಕೊಂಡು, ಹಾಸಿಗೆಯಲ್ಲಿ ನಿದ್ರೆಮಾಡುತ್ತಿದ್ದ ತನ್ನ ಮಗುವನ್ನು ಮುದ್ದಿಟ್ಟುಕೊಂಡು, ಮುದುಕಿಯನ್ನೆಬ್ಬಿಸಿ ಆಕೆಯನ್ನು ನಮಸ್ಕರಿಸಿ ಆಶೀರ್ವಾದವನ್ನು ಪಡೆದು, ಪ್ರಯಾಣ ಹೊರಟಳು.

## ಎಂಟನೆಯ ಪರಿಚ್ಛೇದ

ಪ್ರಮದೆಯು ಪತಿಯನ್ನು ಹುಡುಕುವುದಕ್ಕೆಂದೇನೋ ಹೊರಟಳು? ಸ್ವಲ್ಪ ದೂರ ಹೋದ ಮೇಲೆ, "ನಾನು ಎಲ್ಲಿ ಹುಡುಕಬೇಕು; ಯಾರನ್ನು ಕೇಳಬೇಕು?" ಇತ್ಯಾದಿ ಆಲೋಚನೆಗಳು ತಲೆದೋರಿದುವು. ಕೂಡಲೆ ಆಕೆಯು ಸಮೀಪದಲ್ಲಿದ್ದ ಒಂದು ಮರದಡಿಯಲ್ಲಿ ಕುಳಿತು ಹೀಗೆ ಯೋಚಿಸಿದಳು:—"ನಾನು ಹೀಗೆ ಗೊತ್ತುಗುರಿಯಿಲ್ಲದೆ ಹುಡುಕುತ್ತ ಹೋದರೆ ನನ್ನ ಪತಿಯು ಸಿಕ್ಕುವುದಿಲ್ಲ. ನನ್ನ ಯೌವನವೂ ರೂಪವೂ ನನಗೆ ಮೃತ್ಯುಸ್ವರೂಪವಾಗಿರುವುವು. ಹೇಗಾದರೂ ಮಾಡಿ ಈ ರೂಪವನ್ನು ಮರೆಮಾಡಿಸಿಕೊಂಡು ವೇಷಧಾರಿಯಾಗದಿದ್ದರೆ ಗತ್ಯಂತರವಿಲ್ಲ." ಹೀಗೆಂದಾಲೋಚಿಸಿ ಅಲ್ಲಿಂದ ಹೊರಟು, ಪ್ರಮದೆಯು ಎರಡು ಗಂಟೆಯ ಹೊತ್ತಿನೊಳಗಾಗಿ ಒಂದು ಹಳ್ಳಿಯನ್ನು ಸೇರಿ ಅಲ್ಲಿ ಒಬ್ಬ ಮುದುಕಿಯನ್ನು ಕಂಡು ಕುಶಲಪ್ರಶ್ನೆಮಾಡಿ ಅವಳ ಮನೆಗೆ ಹೋದಳು. ಆ ಮುದುಕಿಯ ಸಹಾಯದಿಂದ ಒಂದು ಕುದುರೆಯನ್ನೂ, ಪುರುಷವೇಷಕ್ಕೆ ತಕ್ಕ ವಸ್ತ್ರಗಳನ್ನೂ, ಒಂದು ಕತ್ತಿಯನ್ನೂ ಸಂಪಾದಿಸಿಕೊಂಡಳು; ಮಧ್ಯಾಹ್ನ ಊಟಉಪಚಾರಗಳನ್ನು ಅಲ್ಲಿಯೇ ತೀರಿಸಿಕೊಂಡು ಇಳಿಹೊತ್ತಾದ ಮೇಲೆ, ಶೂರನಾದ ಒಬ್ಬ ರಾಜಪೂತ ಸರದಾರನಂತೆ ವೇಷವನ್ನು ಧರಿಸಿ ಕುದುರೆಯನ್ನೇರಿ ಪ್ರಯಾಣೋನ್ಮುಖಳಾದಳು.

ದೆಹಲೀ ಪಟ್ಟಣಕ್ಕೆ ಸುತ್ತುಮುತ್ತಲಿರುವ ಪ್ರತಿಯೊಂದು ಗ್ರಾಮವನ್ನೂ ಹೊಕ್ಕು ಪ್ರಮದೆಯು ತನ್ನ ಪತಿಯ ಸಾಧಾರಣ ಪರಿಚಯವನ್ನು ಹೇಳಿ ಜನರನ್ನು ವಿಚಾರಿಸುತ್ತ ಬಂದಳು. ಕೆಲವರು, ಕಾಣಲಿಲ್ಲವೆಂದೂ ಮತ್ತೆ ಕೆಲವರು, ಎಲ್ಲಿಯೋ ಕಂಡಹಾಗಿದ್ದಿತೆಂದೂ ನಾನಾ ವಿಧವಾಗಿ ಹೇಳತೊಡಗಿದರು. ಎಲ್ಲಿಯೂ ಯಾರೂ ಸದುತ್ತರವನ್ನು ಕೊಡಲಿಲ್ಲ. ಪ್ರಮದೆಗೆ ತಿರುಗಿ ತಿರುಗಿ ಸಾಕಾಯಿತು; ಹೊತ್ತುಹೊತ್ತಿಗೆ ಊಟವೂ ನಿದ್ದೆಯೂ ಇಲ್ಲದೆ ಮತ್ತಷ್ಟು ದೇಹಶ್ರಮೆಯುಂಟಾಯಿತು. ಒಂದು ದಿನ ಮಾರ್ಗಾಯಾಸದಿಂದ ಬಳಲಿ ಒಂದು ಮರದ ನೆರಳಿನಲ್ಲಿ ಕುಳಿತು ಆಕೆಯು ಹೀಗೆ ಆಲೋಚಿಸಿದಳು:—

"ಅಯ್ಯೋ! ನಾನು ಇನ್ನೆಲ್ಲಿ ಹುಡುಕಲಿ! ಹುಡುಕಿ ಹುಡುಕಿ ಸಾಕಾಯಿತು. ಇಷ್ಟೆಲ್ಲ ಆದುದು ಏತರಿಂದ? ಇದೆಲ್ಲವೂ ನನ್ನ ದುರಾಶೆಯ ಫಲವಲ್ಲವೆ! ಅಯ್ಯೋ! ಹಾಳಾದ ಆಶೆಯೇ! ನಿನ್ನಿಂದ ಎಷ್ಟೋ ಜನರು ನಿರ್ನಾಮವಾಗಿದ್ದರೂ ನಿನಗೆ ಕರುಣೆಯಿಲ್ಲವೆ? ನಿನ್ನಿಂದ ಎಲ್ಲ ಸದ್ಗುಣಗಳೂ ನಾಶವಾಗುವುವು. ನಿನ್ನ ಮಾಯಾ ಪಾಶಕ್ಕೆ ಬೀಳುವುದಕ್ಕೆ ಮುಂಚೆ ನಾನು ನನ್ನ ಪತಿಯೊಡನೆ ಪರ್ಣಕುಟೀರದಲ್ಲಿದ್ದರೂ ಸ್ವರ್ಗಾನಂದವನ್ನು ಅನುಭವಿಸುತ್ತಿದ್ದೆನು, ಸಂತೋಷವಾಗಿ ಕಾಲಹರಣೆ ಮಾಡುತ್ತಿದ್ದೆನು. ಆ ಹಾಳಾದ **ಕೋಹಿನೂರು** ರತ್ನ......... ಅಲ್ಲ, ಅಲ್ಲ! ಆ ಕಲ್ಲು ತುಂಡಿಗಾಗಿ ಆಶೆಯು ಹುಟ್ಟಿ, ಎಂದು ಅದೃಶ್ಯವಾದ ಆ ನಿನ್ನ ಲೋಹ ಶೃಂಖಲದಿಂದ ಬದ್ಧಳಾದೆನೋ ಅಂದಿನಿಂದಲೇ ನನ್ನ ಮನಸ್ಸೂ ಬುದ್ಧಿಯೂ ಹಾಳಾಗಲು ಪ್ರಾರಂಭಿಸಿತು; ಇಷ್ಟೇ ಅಲ್ಲದೆ, ಈಗ ಒದಗಿರುವ ಕೇಡಿಗೆ ಕಾರಣವಾಗಿ ನನ್ನ ಪ್ರಾಣರತ್ನವಾದ ಪತಿಯನ್ನಗಲಿ ನಾನು ಕಾಡು ಕಾಡು ತಿರುಗುವಂತಾಯಿತು. ಅಯ್ಯೋ! ಪ್ರಾಣರತ್ನವನ್ನು ತುಚ್ಛಮಾಡಿ, ಒಡೆದ ಗಾಜಿನಂತಿರುವ ಆ ಕಲ್ಲನ್ನು ಬಯಸಿದೆನಲ್ಲಾ! ನನ್ನ ದುರ್ಬುದ್ಧಿಗೆ ಧಿಕ್ಕಾರ! ಸೃಷ್ಟಿಕರ್ತನು ಇಂತಹ ಆಶಾ ಜನಕವಾದ ವಸ್ತುಗಳನ್ನೇಕೆ ನಿರ್ಮಿಸಿದನೊ? ಅವನಿಗೆ ಬುದ್ಧಿಯಿಲ್ಲವೆ? ಛೀ, ಛೀ! ನಮಗೆ ಬುದ್ಧಿಯಿಲ್ಲ. ಅಶಾಶ್ವತವಾದ, ಕ್ಷಣಿಕ ಸೌಖ್ಯಪ್ರದವಾದ, ಯಃಕಶ್ಚಿತ ಪದಾರ್ಥಗಳಿಗೆ ನಾವು ಅಜ್ಞಾನದಿಂದ ಭ್ರಮಿಸಿ ಮನ ಸೋಲುವೆವು. ಏಕೆ? ಅವುಗಳನ್ನು ನೋಡುವ ಮಾತ್ರದಿಂದಾಗಲಿ, ಅವುಗಳ ಗುಣಾನುವಾದವನ್ನು ಕೇಳುವುದರಿಂದಾಗಲಿ, ಮುಂದಾಲೋಚನೆಯಿಲ್ಲದೆ ಹುಟ್ಟುವ ಕೇವಲ ಮೋಹ, ದುರಾಶೆಗಳಿಂದ, ಆ ಪದಾರ್ಥಗಳು ಶಾಶ್ವತವೆ ಅಶಾಶ್ವತವೆ ಎಂಬುದನ್ನು ನಾವು ಯೋಚಿಸುವುದೇ ಇಲ್ಲ. ಈ ದುರಾಶೆಯಿಂದ ಹಠವು ಪ್ರಾಪ್ತವಾಗುವುದು. ಈ ಹಠಮಾರಿತನದಿಂದ ನಾವು ಪ್ರಾಣಕಾಂತರನ್ನು ಪೀಡಿಸುತ್ತೇವೆ. ಈ ಹಠದಿಂದಲೇ ಅಲ್ಲವೆ ನಾನು ಈ ದುರವಸ್ಥೆಗೀಡಾದುದು! ಅಯ್ಯೋ ವಿಧಿಯೇ! ನಾನೇಕೆ ನಿಷ್ಠುರ ವಚನಗಳನ್ನಾಡಿದೆನು? ಅವರು ಹೇಳಿದ ಬುದ್ಧಿಯ ಮಾತುಗಳನ್ನು ಏಕೆ ಕೇಳಲಿಲ್ಲ?"

ಹೀಗೆಂದು ದುಃಖಿಸುತ್ತ ಪ್ರಮದೆಯು ತಲೆಯನ್ನು ತಗ್ಗಿಸಿಕೊಂಡು ರೋದನ ಮಾಡಿದಳು. ಅಲ್ಲಿ ಇವಳ ರೋದನವನ್ನು ಕೇಳುವವರಾರು? ಬರಿಯ ಅರಣ್ಯರೋದನ! ಅತ್ತು ಅತ್ತು ತಲೆನೋವು ಪ್ರಾರಂಭ ವಾಯಿತು. ಆಮೇಲೆ ಪ್ರಮದೆಯು ಧೈರ್ಯವನ್ನು ತಾಳಿ, "ನಾನು ಪತಿಗೆ ಅಹಿತವನ್ನಾಚರಿಸಿದೆನು. ಅದಕ್ಕೆ ತಕ್ಕ ಫಲವನ್ನು ಅನುಭವಿಸಲೇ ಬೇಕು. ಪತ್ನಿಯು ಯಾವಾಗಲೂ, ಎಷ್ಟು ಸ್ವಲ್ಪಮಾತ್ರವಾದರೂ, ತನ್ನ ಪತಿಯನ್ನು ವಂಚಿಸಬಾರದು. ಯಾವ ಸತಿಯು ತನ್ನ ಸಮಸ್ತ ಸುಖ ದುಃಖಗಳೂ ಪತಿಯ ಅಧೀನವೆಂದೂ, ಪತಿಯ ಸುಖವೇ ತನ್ನ ಸುಖ ವೆಂದೂ, ಪತಿಯ ಕಷ್ಟವೇ ತನ್ನ ಕಷ್ಟವೆಂದೂ ತಿಳಿದು, ಕಾಯಾ ವಾಚಾ ಮನಸಾ ಅದರಂತೆ ಆಚರಿಸುತ್ತಿರುವಳೋ ಅವಳೇ ನಿಜವಾದ ಸತಿಯು. ನಾನು ಈಗ ಅಸತಿಯಾದೆನು. ಒಳ್ಳೆಯದು; ಅಜ್ಞಾನ ವಶದಿಂದ ಒಂದು ಕಾಡು ಕಲ್ಲಿಗಾಗಿ ಆಶೆಪಟ್ಟು ನಿಷ್ಠುರವಾಡಿ ದುದಕ್ಕೆ ತಕ್ಕ ಫಲವು ದೊರೆಯಿತು; ಆದರೂ ನಾನು ಪತಿಯ ಮುಖವನ್ನು ಕಾಣದೆ ಹಿಂದಿರುಗುವುದಿಲ್ಲ." ಹೀಗೆಂದು ದೃಢ ಪ್ರತಿಜ್ಞೆ ಮಾಡಿ ಪ್ರಮದೆಯು ಮುಂದೆ ಹೊರಟಳು. ಹೋಗುತ್ತ ಹೋಗುತ್ತ ಮಾರ್ಗಾಯಾಸವು ಮಿತಿಮೀರಿದುದರಿಂದ ಸಮೀಪದಲ್ಲಿದ್ದ ಒಂದು ಕೊಳದಲ್ಲಿಳಿದು ತನ್ನ ಹತ್ತಿರವಿದ್ದ ಸ್ವಲ್ಪ ಆಹಾರವನ್ನು ತಿಂದು, ನೀರು ಕುಡಿದು, ದಣಿವಾರಿಸಿಕೊಳ್ಳುವುದಕ್ಕಾಗಿ ಒಂದು ಮರದ ಕೆಳಗೆ ಕುಳಿ ತಳು. ಕುದುರೆಯೂ ನೀರು ಕುಡಿದು ಸ್ವಲ್ಪ ವಿಶ್ರಾಂತಿಯನ್ನು ಹೊಂದುತ ಲಿದ್ದಿತು. ಪ್ರಮದೆಗೆ ಹಾಗೆಯೇ ಅರ್ಧ ನಿದ್ರೆ, ಅರ್ಧ ಎಚ್ಚರಿಕೆಯ ಸ್ಥಿತಿ ಯುಂಟಾಯಿತು. ಆ ಸ್ಥಿತಿಯಲ್ಲಿ ಆಕೆಯು, ಪತಿಯನ್ನು ಹುಡುಕುತ್ತ ತನ್ನ ಪರ್ಣಕುಟೀರದ ಹತ್ತಿರಕ್ಕೆ ಹೋದ ಹಾಗೂ, ಅಲ್ಲಿ ಆ ಕುಟೀರ ವಾಗಲಿ, ತಾನು ನೀರೆರೆದು ಬೆಳೆಯಿಸಿದ ಹೂಗಿಡಗಳಾಗಲಿ ಯಾವುವೂ ಇಲ್ಲದೆ, ವಿಸ್ತಾರವಾದುದೊಂದು ಮಹಡಿಯ ಮನೆಯನ್ನು ಯಾರೋ ಕಟ್ಟಿಸುತ್ತಿದ್ದ ಹಾಗೂ, ತಾನು ಅಲ್ಲಿದ್ದ ಕೆಲಸಗಾರರನ್ನು ವಿಚಾರಿಸು ವಲ್ಲಿ, ಅವರು ಯಾರೂ ಸದುತ್ತರವನ್ನು ಕೊಡದೆ, "ಈ ಮನೆಯು ಒಬ್ಬ ಅಧಿಕಾರಿಗಳದು; ಅವರು ಇಲ್ಲಿ ಬಂದಿಲ್ಲ; ಆಗ್ರಾ ಪಟ್ಟಣದಲ್ಲಿಯೇ

ಇರುತ್ತಾರೆ; ಅವರ ಹೆಸರೇನೋ ನಾವರಿಯೆವು'' ಎಂದು ಹೇಳಿದ ಹಾಗೂ ಕನಸು ಕಂಡಳು. ಕೂಡಲೆ ಎಚ್ಚತ್ತು, ಕುದುರೆಯ ಮೈಯ್ಯೊರಸಿ, ''ಬೇಟಾ, ನಿನ್ನನ್ನು ಬಹಳ ಕಷ್ಟಕ್ಕೀಡು ಮಾಡಿದೆನು'' ಎಂದು ಹೇಳಿ ಮುದ್ದಿಟ್ಟಳು. ಕುದುರೆಗೆ ಅದು ತಿಳಿಯಿತೊ ಏನೊ! ತನ್ನ ಕಾಲುಗಳನ್ನು ಕೆದರುತ್ತ ಭುರ್ ಭುರ್ ಎಂದು ಶಬ್ದಮಾಡಿ, ಅದು ತನ್ನ ಸೇವಾಧುರೀಣತೆಯನ್ನು ವ್ಯಕ್ತಗೊಳಿಸಿತು. ಇದನ್ನು ಕಂಡು ಪ್ರಮದೆಯು ಮರಳಿ ಕುದುರೆಯನ್ನು ಮುದ್ದಿಟ್ಟು ಥಟ್ಟನೆ ಹಾರಿ ಅದನ್ನು ಹತ್ತಿ ಕುಳಿತು ಪ್ರಯಾಣಸ್ಥಳಾದಳು. ಮಧ್ಯಮಾರ್ಗದಲ್ಲಿ ಒಬ್ಬ ವಯೋವೃದ್ಧನು ಎದುರಿಗೆ ಬರುತ್ತಿದ್ದುದನ್ನು ಕಂಡು ಪ್ರಮದೆಯು ಅವನಿಗೆ ವಿನಯದಿಂದ ಕೈಮುಗಿದು, ''ಸ್ವಾಮಿಾ! ತಾವು ಎಲ್ಲಿಂದ ದಯಮಾಡಿಸಿದಿರಿ?'' ಎಂದು ಕೇಳಲು, ಆತನು ಆಗ್ರಾ ಪಟ್ಟಣ ದಿಂದ ಬಂದೆನೆಂದು ಹೇಳಿದನು. ಪ್ರಮದೆಯು ಕುದುರೆಯನ್ನು ನಿಲ್ಲಿಸಿ ಕೆಳಗಿಳಿದು, ತನ್ನ ಪತಿಯ ವಿಷಯಕವಾದ ಬಾಹ್ಯ ಚಿಹ್ನೆಗಳನ್ನು ಆತನಿಗೆ ತಿಳಿಸಿ, ''ಸ್ವಾಮಿಾ! ಆತನು ನನ್ನ ಆಪ್ತಸ್ನೇಹಿತನು; ಆತನನ್ನು ತಾವು ಎಲ್ಲಿಯಾದರೂ ಕಂಡಿರಾ?'' ಎಂದಳು.

ಮನುಷ್ಯ.—ಅಯ್ಯಾ! ನೀವು ಹೇಳಿದಂತಿರುವ ಒಬ್ಬ ಮನುಷ್ಯನು ಈಗಿನ ನಮ್ಮ ರಾಜನಾದ ಬಾಬರ ಮಹಾಶಯನ ಅಂಗರಕ್ಷಕ ನಾಗಿರುವನು; ಆತನ ಹೆಸರನ್ನು ಮಾತ್ರ ನಾನರಿಯೆನು; ಬಹುಶಃ ಆತನೇ ಇರಬಹುದು. ನೀವೇ ಆಗ್ರಾಕ್ಕೆ ಹೋಗಿ ವಿಚಾರಿಸಿರಿ.

ಪ್ರಮದೆಯು, ''ತಮ್ಮಿಂದ ಬಹಳ ಉಪಕಾರವಾಯಿತು; ತಮ್ಮ ಅಪ್ಪಣೆಯಂತೆಯೇ ನಡೆಯುವೆನು'' ಎಂದು ಹೇಳಿ ಆತನ ಅಪ್ಪಣೆಯನ್ನು ಪಡೆದು, ಕುದುರೆಯನ್ನೇರಿ ಆಗ್ರಾಭಿಮುಖವಾಗಿ ಹೊರಟು ಮನಸ್ಸಿನಲ್ಲಿ, ''ಓಹೋ! ಮರೆತಿದ್ದೆನು; ನನ್ನ ಪತಿಯು, ಬಾಬರನ ಅಂಗರಕ್ಷಕ ನಾಗಿರುವೆನು ಎಂದು ಆ ದಿನವೇ ಹೇಳಿದ್ದರು; ವ್ಯರ್ಥವಾಗಿ ಕಂಡ ಕಂಡ ಊರುಗಳನ್ನೆಲ್ಲ ಸುತ್ತಿ ಬೆಂಡಾದೆನಲ್ಲಾ'' ಎಂದು ಕುದುರೆಯನ್ನು ವೇಗವಾಗಿ ಬಿಟ್ಟುಕೊಂಡು ಆ ದಿನ ಸಾಯಂಕಾಲದ ಸಮಯಕ್ಕೆ ಆಗ್ರಾ ಪಟ್ಟಣವನ್ನು ಸೇರಿದಳು.

ಈ ಚರಿತ್ರೆಯ ಕಾಲದಲ್ಲಿ ಆಗ್ರಾ ಪಟ್ಟಣವೇ ರಾಜಧಾನಿಯಾಗಿದ್ದಿತು. ಪರರಾಜರ ದಾಳಿಯಿಂದ ಭಿನ್ನ ಭಿನ್ನವಾಗಿ ಹೋಗಿದ್ದರೂ ಬಾಬರಷಹನ ಘನೌದಾರ್ಯದಿಂದ ಪಟ್ಟಣವು ತಕ್ಕ ಮಟ್ಟಿಗೆ ರಮಣೀಯವಾಗಿಯೇ ಇದ್ದಿತು. ಪ್ರಮದೆಯು ಆ ದಿನದ ರಾತ್ರಿಯನ್ನು ಕಳೆಯುವುದಕ್ಕೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತ ಒಂದು ಪ್ರಶಸ್ತವಾದ ಬೀದಿಗೆ ಬಂದು, ಅಲ್ಲಿ ತಿರುಗಾಡುತ್ತಿದ್ದವರನ್ನು ಕೇಳಿ, ಸತ್ರವು ಎಲ್ಲಿರುವುದೆಂಬುದನ್ನು ವಿಚಾರಿಸುತ್ತಿದ್ದಳು. ಆ ಮಾರ್ಗದಲ್ಲಿ ಹೋಗುತ್ತಿದ್ದ ನಡು ಹರೆಯದ ಒಬ್ಬ ಹೆಂಗುಸು ಮುಂದೆ ಬಂದು ಈ ವೇಷ ಧಾರಿಯನ್ನು ನೋಡಿ ಹೊಸಬನೆಂದರಿತು, "ಅಪ್ಪಾ! ಸತ್ರವನ್ನೇಕೆ ವಿಚಾರಿಸುತ್ತೀಯೆ? ಅದು ಇಲ್ಲಿಗೆ ಬಹು ದೂರ. ನೀನು ಇಲ್ಲಿಗೆ ಹೊಸಬನೆಂದು ತೋರುವುದು. ನಿನ್ನ ಪರಿಚಯದವರು ಯಾರೂ ಇಲ್ಲಿ ಇಲ್ಲವೇನು?" ಎಂದು ಕೇಳಿದಳು. ಪರಂಪರೆಯಾಗಿ ವಿನಯದಿಂದ ಕೂಡಿ ಬರುತ್ತಿರುವ ಆ ಹೆಂಗುಸಿನ ಮಾತುಗಳನ್ನು ಕೇಳಿ ವೇಷ ಧಾರಿಯು, "ಅಹುದಮ್ಮಾ! ನಾನು ಹೊಸಬ; ಇಂದೇ ಈ ಪಟ್ಟಣಕ್ಕೆ ಬಂದುದು" ಎಂದನು.

ಹೆಂಗುಸು.—ನಿನ್ನ ಮನಸ್ಸೊಪ್ಪಿದರೆ ಈ ದಿನ ನಮ್ಮ ಮನೆಯಲ್ಲಿಯೇ ಉಳಿದುಕೊಳ್ಳಬಹುದು; ನಮ್ಮ ಮನೆಯು ಇಲ್ಲಿಯೇ ಸಮಿಾಪದಲ್ಲಿರುವುದು.

ಪ್ರಮದೆ.—ಅಮ್ಮಾ, ಸಂತೋಷ! ನಿಮ್ಮ ಮನೆಯಲ್ಲಿ ಕುದುರೆಯನ್ನು ಕಟ್ಟಲು ಸ್ಥಳವಿದೆಯೇ?

ಹೆಂಗುಸು.—ಓಹೋ! ಅದಕ್ಕೇನು? ಬೇಕಾದಷ್ಟು ಸ್ಥಳವಿದೆ. ನನ್ನ ಮಗನು ಊರಲ್ಲಿಲ್ಲದುದರಿಂದ, ಅವನ ಕುದುರೆಯನ್ನು ಕಟ್ಟುವ ಸ್ಥಳದಲ್ಲಿಯೇ ಇದನ್ನು ಕಟ್ಟಬಹುದು. ಹಾಗಾದರೆ ಬರುತ್ತೀಯಷ್ಟೆ? ನನಗೆ ಬಹಳ ಕೆಲಸವಿದೆ.

ಹೀಗೆಂದು ಹೇಳಿ ಆ ಹೆಂಗುಸು ತನ್ನ ಮನೆಯ ದಾರಿಯನ್ನು ಹಿಡಿದಳು. ಪ್ರಮದೆಯೂ ಆ ಹೆಂಗುಸಿನ ಹಿಂದೆಯೇ ಹೊರಟು, ಸ್ವಲ್ಪ

ಹೊತ್ತಿನಲ್ಲಿ ಒಂದಾನೊಂದು ಸಣ್ಣ ಬೀದಿಯಲ್ಲಿರುವ ಆ ಹೆಂಗುಸಿನ ಮನೆಗೆ ಬಂದು ಸೇರಿದಳು. ಆ ಹೆಂಗುಸು ಒಂದು ಕೊಟ್ಟಿಗೆಯನ್ನು ತೋರಿಸಿ ಅಲ್ಲಿ ಕುದುರೆಯನ್ನು ಕಟ್ಟಬಹುದೆಂದು ಹೇಳಲು, ಪ್ರಮದೆಯು ಕುದುರೆಯನ್ನು ಕಟ್ಟಿ ಅದರ ಮೈಯನ್ನು ತಿಕ್ಕುತ್ತಿರು ವಲ್ಲಿ ಆ ಹೆಂಗುಸು ಸ್ವಲ್ಪ ಹುಲ್ಲನ್ನು ತಂದು ಕುದುರೆಗೆ ಹಾಕಿದಳು. ಇದನ್ನು ನೋಡಿ ಪ್ರಮದೆಗೆ ಅತ್ಯಾನಂದವಾಯಿತು. ಮನೆಯ ಯಜ ಮಾನಿಯು ದೀಪವನ್ನು ಹೊತ್ತಿಸಿ ತಂದು ಪಡಸಾಲೆಯಲ್ಲಿಟ್ಟು ವೇಷ ಧಾರಿಯನ್ನು ಕುರಿತು, "ತಮ್ಮಾ! ಬಹಳ ಆಯಾಸಪಟ್ಟಿರುವೆ, ಸ್ವಲ್ಪ ವಿಶ್ರಮಿಸಿಕೊ" ಎಂದಳು.

ಪ್ರಮದೆ.—ಒಳ್ಳೆಯದಮ್ಮಾ! ನಿಮ್ಮಿಂದ ನನಗೆ ಬಹಳ ಉಪಕಾರ ವಾಯಿತು. ಗುರುತರಿಯದ ಸ್ಥಳದಲ್ಲಿ ಪರಸ್ಥಳದವರನ್ನು ಇಷ್ಟು ಮಟ್ಟಿಗೆ ಉಪಚರಿಸತಕ್ಕವರು ಎಲ್ಲಿರುವರು? ನಿಮ್ಮ ಮಗನು ಊರಲ್ಲಿಲ್ಲವೆಂದು ಹೇಳಿದಿರಲ್ಲವೆ? ಎಲ್ಲಿಗೆ ಹೋಗಿರುವನು? ಆತನ ಉದ್ಯೋಗವೇನು?

ಯಜಮಾನಿ.—ಅಪ್ಪಾ! ನನ್ನ ಮಗನು ಅದಾವುದೋ ಒಂದು ರಾಜ ಕಾರ್ಯಕ್ಕಾಗಿ ಸಮೀಪದ ಗ್ರಾಮಕ್ಕೆ ಹೋಗಿರುವನು. ಅವನು ಬರುವುದಕ್ಕೆ ಒಂದೆರಡು ದಿನ ತಡವಾಗಬಹುದು. ರಾಜನ ಆಸ್ಥಾನದಲ್ಲಿ ಅವನಿಗೊಂದು ಕೆಲಸವಿರುವುದು; ತಿಂಗಳಿಗೆ ಇಪ್ಪತ್ತೈದು ಮೊಹರಾ ಗಳನ್ನು ಸಂಬಳವಾಗಿ ಕೊಡುವರು.

ಪ್ರಮದೆ.—ನೀವು ಯಾವ ಮತಸ್ಥರು?

ಯಜಮಾನಿ.—ನಾವು ರಾಜಪುತ್ರರು. ನಿನ್ನನ್ನು ನೋಡಿದರೆ ರಾಜಪುತ್ರನಂತೆಯೇ ಕಾಣುವುದು; ಅಹುದೋ ಅಲ್ಲವೊ?

ಪ್ರಮದೆ.—ಅಹುದು, ನಾನೂ ರಾಜಪೂತನೇ. ನಿಮ್ಮ ಹೆಸರೇನು?

ಯಜಮಾನಿ.—ನನ್ನ ಹೆಸರು ಕುಂತಲ ಕುಮಾರಿ; ಆದರೆ ಇಲ್ಲಿಯ ಜನರೆಲ್ಲರೂ ನನ್ನನ್ನು ಕುಂತಲಮ್ಮ ಎಂದು ಕರೆಯುವರು. ಅದು ಹಾಗಿರಲಿ; ನೀನು ಬಹಳ ಆಯಾಸಪಟ್ಟಿರುವಂತೆ ತೋರುವುದು; ನಿನಗೆ ಹಸಿವೂ ಆಗಿರಬಹುದು; ಊಟಕ್ಕೆ ಸಿದ್ಧಮಾಡುವೆನು.

ಹೀಗೆಂದು ಹೇಳಿ ವೇಷಧಾರಿಯು ಆಪಾದ ಮಸ್ತಕವನ್ನೂ ಒಂದು ಸಾರಿ ತೀಕ್ಷ್ಣದೃಷ್ಟಿಯಿಂದ ನೋಡಿ ಹುಸಿ ನಗು ನಗುತ್ತ, ಅಡಿಗೆಯ ಮನೆಗೆ ಹೋಗಿ ಅಲ್ಲಿ ಒಲೆಯನ್ನು ಹೊತ್ತಿಸಿ ಗೋಧಿಯ ರೊಟ್ಟಿಯನ್ನು ಮಾಡುತ್ತ ಕುಳಿತು, ಕುಂತಲಮ್ಮನು ತನ್ನಲ್ಲಿಯೇ ಹೀಗೆ ಯೋಚಿಸಿದಳು :—"ಇದೇನೋ ಹೊಸ ವ್ಯಾಪಾರವಾಗಿದೆ; ಉಡುಪೇನೊ ಪುರುಷನದಾಗಿದ್ದರೂ ಧ್ವನಿಯೂ ಮುಖ ಲಕ್ಷಣವೂ ಪುರುಷನದಂತಿಲ್ಲ. ಇದು ನಿಜವಾಗಿಯೂ ವೇಷವೇ ಇರಬೇಕು ; ಏಕೆಂದರೆ, ಮಾತನಾಡುವಾಗ ತೋರುವ ಆ ಭ್ರೂಭಂಗ, ಆ ದಂತಗಳ ಕಾಂತಿ, ಆ ಮಂದಹಾಸ, ಗ್ರೀವ ಭಂಗ—ಇವೇ ಮುಂತಾದ ಲಾವಣ್ಯಲಕ್ಷಣಗಳು ಆ ಸುಟ್ಟ ಮೋರೆಯ ಪುರುಷರಲ್ಲಿ ಎಲ್ಲಿಂದ ಬರಬೇಕು ? ವಿಧಾತನು ಪುರುಷರನ್ನು ಸೃಷ್ಟಿಸುವಾಗಲೇ ಲಾವಣ್ಯವನ್ನೂ ಮಾರ್ದವವನ್ನೂ ಸ್ತ್ರೀಯರ ಪಾಲಿಗೆ ಬಿಟ್ಟುಕೊಟ್ಟು, ಅವುಗಳ ಗಂಧವನ್ನು ಕೂಡ ಪುರುಷರಿಗೆ ಲೇಪಿಸದೆ, ಕೇವಲ ಕಾಠಿನ್ಯ, ರೌದ್ರಾವತಾರ, ಕ್ರೂರ ದೃಷ್ಟಿ—ಇತ್ಯಾದಿ ದುರ್ಗುಣಗಳನ್ನೇ ಅವರ ಶರೀರದಲ್ಲಿ ತುಂಬಿರುವನು. ಇರಲಿ, ನೋಡೋಣ." ಹೀಗೆಂದು ಆಲೋಚಿಸಿ ಕುಂತಲಮ್ಮನು ರೊಟ್ಟಿಯನ್ನು ಸಿದ್ಧಪಡಿಸಿ, ತಂಬಿಗೆಯಲ್ಲಿ ನೀರನ್ನು ತಂದು ವೇಷಧಾರಿಯ ಮುಂದಿಟ್ಟು, "ತಮ್ಮಾ! ಏಳು, ಊಟ ಮಾಡೋಣ" ಎಂದಳು. ಪ್ರಮದೆಯು ಮುಖವನ್ನೂ ಕೈಕಾಲನ್ನೂ ತೊಳೆದುಕೊಂಡು ಉಡುಪನ್ನು ತೆಗೆಯದೆಯೇ ಒಳಗೆ ಹೋದಳು. ಕುಂತಲೆಯು ಒಂದು ತಟ್ಟೆಯಲ್ಲಿ ರೊಟ್ಟಿ, ಸಕ್ಕರೆ, ತುಪ್ಪ, ಪಲ್ಲೆಯ ಮುಂತಾದುವನ್ನು ತಂದು ವೇಷಧಾರಿಯ ಮುಂದಿಟ್ಟು, ತನಗೂ ಒಂದು ತಟ್ಟೆಯಲ್ಲಿ ಅವನ್ನು ತಂದುಕೊಂಡಳು. ಇಬ್ಬರೂ ಆ ಮಾತು ಈ ಮಾತುಗಳನ್ನಾಡುತ್ತ ಊಟಕ್ಕೆ ಕುಳಿತರು.

ಕುಂತಲೆ.—ತಮ್ಮಾ! ನಿನ್ನ ಹೆಸರೇನು? ನಾನು ಇದುವರೆಗೂ ಕೇಳಲೇ ಇಲ್ಲ.

ಪ್ರಮದೆ.—ನನ್ನ ಹೆಸರು ಪ್ರಮೋದಸಿಂಹ.

ಕುಂತಲೆ.—ಸರಿ, ನೀನು ದೆಹಲಿಯ ಕಡೆಯಿಂದ ಬಂದಿರುವೆಯೊ ಮಧುರೆಯ ಕಡೆಯಿಂದ ಬಂದಿರುವೆಯೊ?

ಪ್ರಮದೆ.—ನಾನು ಮಧುರೆಯ ನಿವಾಸಿ, ಅಲ್ಲಿಂದ ಹೊರಟು ಐದಾರು ದಿನಗಳಾದುವು. ಇಲ್ಲಿ ನಿಮ್ಮ ರಾಜನು ಯಾರು?

ಕುಂತಲೆ.—ಇಲ್ಲಿಯ ರಾಜನು ಬಹಳ ಉದಾತ್ತನು. ಆತನ ಹೆಸರು ಬಾಬರಷಹಾ. ಆತನು ದೆಹಲಿಯ ಸುತ್ತುಮುತ್ತಲೂ ಇರುವ ರಾಜ್ಯವನ್ನೆಲ್ಲ ಗೆದ್ದಿರುವನು.

ಪ್ರಮದೆ.—ಅಹುದು, ಮರೆತಿದ್ದೆನು; ಇದನ್ನು ನಾನೂ ಅನೇಕರ ಬಾಯಿಂದ ಕೇಳಿರುವೆನು.

ಕುಂತಲೆ.—ನನ್ನ ಮಗನಿಗೂ ಆ ದೊರೆಯ ಬಳಿಯಲ್ಲಿಯೇ ಕೆಲಸ ಎದೆಯೆಂದು ಹೇಳಿದೆನಲ್ಲವೆ? ನಮ್ಮವನಿಗೂ ರಾಜನಿಗೂ ಪರಮ ಸ್ನೇಹ ....ಹಾ! ತಾಳು! ತಾಳು! ಇದೇನು? ನಿನ್ನ ಎದೆಯ ಮೇಲೆ ಚೇಳು! ಚೇಳು!!

ಹೀಗೆಂದು ಹೇಳಿ ಕುಂತಲೆಯು ಗಾಬರಿಪಟ್ಟವಳಂತೆ ನಟಿಸುತ್ತ ತನ್ನ ಕೈಯನ್ನು ವೇಷಧಾರಿಯ ಎದೆಯ ಮೇಲಿಟ್ಟು ನವರಿದಳು.

ಪ್ರಮದೆ.— (ಗಾಬರಿಪಟ್ಟು) ಎಲ್ಲಿ? ಎಲ್ಲಿ? ಚೇಳು ಎಲ್ಲಿಂದ ಬಂದಿತು? ಅದೇನೋ ಬಟ್ಟೆಯಮೇಲಿನದೊಂದು ಗುರುತಾಗಿರಬೇಕು.

ಇದನ್ನು ಕಂಡು ಪ್ರಮದೆಗೆ ಸಂಶಯ ಹುಟ್ಟಿ ಸ್ವಲ್ಪ ಹಿಂದಕ್ಕೆ ಸರಿದು, ಈ ಧೂರ್ತಳು ತನ್ನ ನಿಜ ಸ್ಥಿತಿಯನ್ನು ಪರೀಕ್ಷಿಸಲು ಈ ಆಟವನ್ನು ಹೂಡಿರಬೇಕೆಂಬ ಭೀತಿಯುಂಟಾಯಿತು. ಆದರೆ ಕುಂತಲೆಗೇನೋ ತನ್ನ ಮನಸ್ಸಿನ ಸಂಶಯವು ತೀರಿತು. ಆಕೆಯು ಸ್ವಲ್ಪ ಹೊತ್ತು ಸುಮ್ಮನಿದ್ದು, "ಪ್ರಮೋದಾ! ಇದ್ದೀತು; ನನಗೆ ವೃದ್ಧಾಪ್ಯದಸೆಯಿಂದ ಅಷ್ಟು ಸರಿಯಾದ ದೃಷ್ಟಿಪಾಟವವಿಲ್ಲ; ಅದು ಬಟ್ಟೆಯ ಮೇಲಣ ಗುರುತೇ ಇರಬೇಕು. ಇದು ಹಳೆಯ ಮನೆ; ಇಲ್ಲಿ ಚೇಳಿನ ಹಾವಳಿ ಬಹಳ ಹೆಚ್ಚು; ಎಷ್ಟೋ ಸಾರಿ ಅಟ್ಟದಿಂದ ನಮ್ಮ ಹುಡುಗನ ಮೈಮೇಲೆ ತೊಪ್ಪೆಂದು ಬಿದ್ದಿವೆ. ನಾವು ಎಷ್ಟೋ ಚೇಳುಗಳನ್ನು ಹೊಡೆದು

ಹಾಕಿದ್ದೇವೆ. ಆದರಿಂದ, ಚೇಳಿರಬಹುದೆಂದು ಭಾವಿಸಿದೆನಲ್ಲದೆ ಬೇರೆ ಎಂದು ತಿಳಿಯಬೇಡ" ಎಂದು ಹೇಳುತ್ತ ತನ್ನ ಪರೀಕ್ಷಣಾ ಶಕ್ತಿಯನ್ನು ಮತ್ತೆ ಪ್ರಕಾಶಪಡಿಸಿದಳು. ಅಷ್ಟರಲ್ಲಿ ಊಟವೂ ಮುಗಿಯಿತು. ತನ್ನ ನಿಜಸ್ಥಿತಿಯನ್ನು ಆ ಗೃಧ್ರವು ಕಂಡುಹಿಡಿದಿರಬೇಕೆಂಬ ಸಂಶಯವು ಪ್ರಮದೆಗೆ ಮತ್ತಷ್ಟು ಹೆಚ್ಚಿತು. ಆ ವೇಳೆಗೆ ಯಜಮಾನಿಯು ತವ್ಮಿಬ್ಬರಿಗೂ ಮಲಗಿಕೊಳ್ಳುವುದಕ್ಕೆ ಪ್ರತ್ಯೇಕ ಪ್ರತ್ಯೇಕವಾಗಿ ಹಾಸಿಗೆಗಳನ್ನು ಸಿದ್ಧಪಡಿಸಿದಳು. ಇಬ್ಬರೂ ತಂತಮ್ಮ ಹಾಸಿಗೆಯ ಮೇಲೆ ಬಂದು ಕುಳಿತರು ; ಮರಳಿ ಮಾತಿಗಾರಂಭವಾಯಿತು.

ಪ್ರಮದೆ.—ನಿಮ್ಮ ಮಗನು ನಾಳೆಯಾದರೂ ಬರಬಹುದಲ್ಲವೆ?

ಕುಂತಲೆ.—ಬಂದರೂ ಬರಬಹುದು ; ಅಷ್ಟು ಅವಸರವೇನು? ಇಲ್ಲಿರಲು ನೀನು ಸಂಕೋಚಪಡುತ್ತಿರುವಂತಿದೆ.

ಪ್ರಮದೆ.—ಸಂಕೋಚವೇನೂ ಇಲ್ಲ; ನನಗೆ ರಾಜ ಮಂದಿರಕ್ಕೆ ಹೋಗಬೇಕಾದ ಕಾರ್ಯವಿದೆ.

ಕುಂತಲೆ.—ಆಗಲಿ; ನನ್ನ ಮಗನು ಬರದಿದ್ದರೆ ತಾನೆ ಏನು? ನನಗೆ ರಾಜ ಮಂದಿರದಲ್ಲಿರುವ ಕೆಲವರು ಅಧಿಕಾರಿಗಳ ಪರಿಚಯವುಂಟು; ನಿನ್ನ ಕಾರ್ಯಕ್ಕೆ ನನ್ನ ಕೈಯಲ್ಲಾದ ಮಟ್ಟಿಗೂ ಸಹಾಯ ಮಾಡುವೆನು ; ಏನೂ ಸಂಶಯಪಡಬೇಡ. ನಿನ್ನ ಕಾರ್ಯವು ಏನೆಂಬುದನ್ನು ಸ್ವಲ್ಪ ವಿಶದಿಸಿ ಹೇಳು.

ಪ್ರಮದೆ.—ನನ್ನ ಕಾರ್ಯವೇನೂ ಅಷ್ಟು ಮಹತ್ತರವಾದುದಲ್ಲ ; ನನ್ನ ಪ್ರಿಯ ಸ್ನೇಹಿತನೊಬ್ಬನು ಅತ್ಯಲ್ಪ ವಿಷಯಕ್ಕಾಗಿ ನನ್ನ ಮೇಲೆ ಕೋಪಗೊಂಡು ಹೊರಟುಹೋದನು. ಅವನನ್ನು ಹುಡುಕುವುದಕ್ಕಾಗಿಯೇ ನಾನೀಗ ಬಂದಿರುವುದು. ಅವನು ರಾಜ ಮಂದಿರದಲ್ಲಿರುವನಂತೆ.

ಕುಂತಲೆ.—(ತಲೆಯಲ್ಲಾಡಿಸುತ್ತ) ಸರಿ, ಸರಿ, ತಿಳಿಯಿತು ; ನಾಳೆಯೇ ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡೋಣ. ಈಗ ನೀನು ಸ್ವಸ್ಥವಾಗಿ ಮಲಗಿ ನಿದ್ದೆ ಹೋಗು.

ಪ್ರಮದೆಯು ಆಯಾಸಪಟ್ಟಿದ್ದುದರಿಂದ ಕೂಡಲೆ ಮಲಗಿ ನಿದ್ದೆ ಹೋದಳು. ಕುಂತಲೆಯು ತನ್ನ ಮನಸ್ಸಿನಲ್ಲಿ, "ಎಲೇ ಹುಡುಗಿ! ನನ್ನ ಮುಂದೆ ಇಷ್ಟು ಚಾತುರ್ಯವೆ? ಉಡುಪನ್ನು ಮಾರ್ಪಡಿಸಿಕೊಂಡು ದೊಡ್ಡಮಾತಾಡಿದ ಮಾತ್ರಕ್ಕೇ ನೈಜವಾದ ನಡೆ ನುಡಿಗಳನ್ನು ಬಚ್ಚಿಡುವುದಕ್ಕಾದೀತೆ? ಅದರಲ್ಲೂ ನನ್ನ ಕಣ್ಣ ಮುಂದೆ! ಆಹಾ! ನಿನ್ನ ಸ್ನೇಹಿತನು ಯಾರೆಂಬುದೂ ಗೊತ್ತಾಯಿತು: ಗಂಡನನ್ನು ಹುಡುಕಿಕೊಂಡು ಬಂದ ಗಯ್ಯಾಳಿ ಹೆಣ್ಣೇ! ಅಬ್ಬಬ್ಬಾ ಎಷ್ಟು ತಕ್ಕು ನಿನಗೆ! ಕಣ್ಣುಗಳಿದ್ದರೂ ಕುರುಡರಾದವರೆದುರಿಗೆ ನಿನ್ನ ಆಟವು ನಡೆದೀತು. ನಿನ್ನನ್ನು ಬೀದಿಯಲ್ಲಿ ಕಂಡಾಗಲೇ, ಇದೊಂದು ವಿಚಿತ್ರ ವ್ಯಕ್ತಿಯೆಂದು ತಿಳಿದು, ನನ್ನ ಬಲೆಯಲ್ಲಿ ಸೇರಿಸಿಕೊಳ್ಳಬೇಕೆಂಬ ಉದ್ದೇಶದಿಂದಲೇ ನಿನ್ನನ್ನು ಮಾತನಾಡಿಸಿದೆನು; ಇಲ್ಲದಿದ್ದರೆ ನಿನ್ನೊಡನೆ ನನಗೇನು ಕೆಲಸ? ಇರಲಿ; ಈಗ ಎಲ್ಲ ಗೊತ್ತಾಯಿತು. ಹೇಗಾದರೂ ನೀನು ಈಗ ಲೋಹ ಪಂಜರದಲ್ಲಿ ಸಿಕ್ಕಿಬಿದ್ದಿರುವೆ, ಇನ್ನೆಲ್ಲಿಗೆ ಹೋಗುವೆ? ನನ್ನ ಕೈಯಿಂದ ತಪ್ಪಿಸಿಕೊಂಡು ಹೋಗಬೇಕಾದರೆ ಆ ಬ್ರಹ್ಮನಿಗೂ ಸಾಧ್ಯವಿಲ್ಲ; ನಿದ್ದೆಹೋಗು, ಚೆನ್ನಾಗಿ ನಿದ್ದೆಹೋಗು. ನಾಳೆಯ ದಿನವೇ ನಿನ್ನನ್ನು ಸರಿಯಾದ ಸ್ಥಳದಲ್ಲಿ ಸೇರಿಸಿ, ನನ್ನ ಕಾರ್ಯವನ್ನು ಸಾಧಿಸಿಕೊಳ್ಳುವೆನು" ಎಂದುಕೊಂಡು ತಾನೂ ಮಲಗಿ, ನಿದ್ದೆಹೋಗುವಳಂತೆ ನಟಿಸುತ್ತ, ಮಧ್ಯರಾತ್ರಿಯಲ್ಲಿ ಎದ್ದು ಎಲ್ಲಿಗೋ ಹೊರಟುಹೋದಳು. ಮಾರ್ಗಾಯಾಸದಿಂದ ಬಳಲಿ ಮೈಮರೆತು ನಿದ್ರಿಸುತ್ತಿದ್ದ ಪ್ರಮದೆಗೆ ಯಾವುದೂ ಗೊತ್ತಾಗಲಿಲ್ಲ. ಬೆಳಗಾಗುವುದರೊಳಗಾಗಿ ಕುಂತಲೆಯು ಹಿಂದಿರುಗಿ ಬಂದು ತನ್ನ ಹಾಸಿಗೆಯಲ್ಲಿಯೇ ಮಲಗಿದಳು.

ಆಹಾ! ಈ ಲೋಕದಲ್ಲಿ ಎಂತೆಂತಹ ನೀಚಾತ್ಮರಿರುವರು! "ಬಾಯಲ್ಲಿ ಬೆಣ್ಣೆ, ಕಂಕುಳಲ್ಲಿ ದೊಣ್ಣೆ" ಎಂಬಂತೆ ಸವಿಯಾದ ಮಾತುಗಳನ್ನಾಡುತ್ತ, ವಂಚನೆಯನ್ನರಿಯದ ಸಾತ್ವಿಕರನ್ನು ತಮ್ಮ ಬಲೆಯಲ್ಲಿ ಸಿಕ್ಕಿಸಿಕೊಂಡು, ಅವರು ಗೋಳಾಡುತ್ತ ಕಣ್ಣೀರಿಡುವುದನ್ನು ನೋಡಿ ಅವರನ್ನು ಹಾಸ್ಯಮಾಡಿ ನಗುತ್ತ, ಲೋಕ ಕಂಟಕರಾಗಿಯೂ ಧರ್ಮನಾಶಕರಾಗಿಯೂ ಇರುವ ಇಂತಹ ನೀಚರಿಗೆ ಪರಲೋಕದಲ್ಲಿಯಾದರೂ

ತಕ್ಕ ದಂಡನೆಯಾಗುವುದಿಲ್ಲವೆ? ನಿಸ್ಸಂಶಯವಾಗಿ ಆಗುವುದು. ಎಷ್ಟು ಕಾಲಾತೀತವಾದರೂ, ಕಡೆಗೆ ಧರ್ಮವು ಜಯಿಸುವುದಲ್ಲದೆ ಅಧರ್ಮವೆಂದಿಗೂ ಜಯಿಸಲಾರದು. ಲೋಕ ಕಲ್ಯಾಣ ಕರ್ತೃವಾದ ಆ ಭಗವಂತನು, ಎಲ್ಲಿ, ಯಾವಾಗ ಧರ್ಮಕ್ಕೆ ಗ್ಲಾನಿಯುಂಟಾಗುವುದೋ ಅಲ್ಲಿಯೇ, ಆ ಕ್ಷಣದಲ್ಲಿಯೇ ಯಾವುದೋ ಒಂದು ರೂಪದಿಂದ ಅವತರಿಸಿ, ಅಧರ್ಮವನ್ನು ನಾಶ ಮಾಡಿ ಧರ್ಮವನ್ನು ಸಂಸ್ಥಾಪನೆ ಮಾಡಿಯೇ ಮಾಡುವನು; ಇದು ಸತ್ಯ.

## ಒಂಬತ್ತನೆಯ ಪರಿಚ್ಛೇದ

ಬೆಳಗಾಯಿತು. ಲೋಕ ವ್ಯವಹಾರದ ಯಾತಾಯಾತಗಳನ್ನರಿಯದ ಪ್ರಮದೆಯು ರಾತ್ರಿಯೆಲ್ಲ ಸುಖ ಸ್ವಪ್ನವನ್ನೇ ಕಾಣುತ್ತಿದ್ದಳು. ಕುಂತಲೆಗೂ ತನಗೂ ಪರಿಚಯವಾದುದು ಬಹಳ ಅನುಕೂಲವೇ ಆಯಿ ತೆಂದೂ, ಆಕೆಯ ಸಹಾಯದಿಂದಲೋ ಆಕೆಯ ಮಗನ ಸಹಾಯ ದಿಂದಲೋ ತನ್ನ ಪತಿಯನ್ನು ಕಂಡುಹಿಡಿದು, ತನ್ಮೂಲಕ ಆತ್ಮಾ ನಂದ ಸುಖದಲ್ಲಿ ನಲಿದಾಡಬಹುದೆಂಬ ತನ್ನ ಭವಿಷ್ಯತ್ಸುಖ ಸಂಬಂಧ ವಾದ ಸುಸ್ವಪ್ನಗಳನ್ನು ಕಾಣುವುದರಲ್ಲಿಯೇ ಆ ರಾತ್ರಿಯೆಲ್ಲ ಕಳೆದು ಹೋಯಿತು. ಕುಂತಲೆಯು ತನ್ನ ಹೃದಯ ಸ್ಪರ್ಶವಾಡಿದುದರ ಗೂಢ ರಹಸ್ಯವೂ ಅವಳ ಕುಟಿಲ ತಂತ್ರಗಳೂ ಪ್ರಮದೆಗೆ ಹೊಳೆಯಲೇ ಇಲ್ಲ; ಅವಿಶ್ವಾಸಕ್ಕೆ ಪ್ರತಿಯಾಗಿ ಅವಳಲ್ಲಿ ಸಂಪೂರ್ಣವಾದ ನಂಬು ಗೆಯೇ ತೋರುತ್ತಿದ್ದಿತು. ಸೂರ್ಯನುದಯಿಸುವುದಕ್ಕೆ ಮುಂಚೆಯೇ ಪ್ರಮದೆಯು ನಿದ್ದೆಯಿಂದೆದ್ದು, ಇಷ್ಟದೈವವನ್ನು ಸ್ಮರಿಸಿ, ತನ್ನ ಪತಿಗೆ ಶ್ರೇಯಸ್ಸುಂಟಾಗಲೆಂದೂ ತಾನು ಬಂದ ಕಾರ್ಯವು ಸಫಲವಾಗಲೆಂದೂ ಪ್ರಾರ್ಥಿಸಿ, ಹಾಸಿಗೆಯ ಮೇಲೆಯೇ ಕುಳಿತಿದ್ದಳು. ಚೆನ್ನಾಗಿ ಬೆಳಕು ಹರಿಯುತ್ತಲೆ ಕುಂತಲಮ್ಮನೂ ಎದ್ದುಬಂದು ವೇಷಧಾರಿಯನ್ನು ನೋಡಿ, "ಮಗೂ, ಪ್ರಮೋದಸಿಂಹಾ! ಸುಪ್ರಭಾತವೇ? ರಾತ್ರಿ ಸುಖ ವಾಗಿ ನಿದ್ದೆ ಬಂದಿತೇ?" ಎಂದು ಕೇಳಿದಳು. ಪ್ರಮದೆಯು ಅದಕ್ಕೆ ತಕ್ಕ ಉಪಚಾರದ ಮಾತನ್ನಾಡಿ ಕುಂತಲಮ್ಮನನ್ನು ಹರಸಿದಳು.

ಕುಂತಲೆಯು ಇದಕ್ಕೆ ಪ್ರತ್ಯುತ್ತರವಾಗಿ, "ಬೇಟಾ! ನಿನಗೆ ಮಂಗಳವಾಗಲಿ. ಬೇಗನೆ ನಿನ್ನ ಪ್ರಾತರ್ವಿಧಿಯನ್ನು ಮುಗಿಸು; ಅಷ್ಟರಲ್ಲಿ ನಾನೂ ಮನೆಗೆಲಸವನ್ನು ತೀರಿಸುವೆನು. ಆಮೇಲೆ, ನಾನು ನಿನ್ನೆಯ ದಿನ ಹೇಳಿದಂತೆ, ನಮ್ಮ ಮಹಾರಾಜನ ಆಪ್ತ ಸ್ನೇಹಿತನೂ ಅತಿ ಸಮೀಪ ಬಂಧುವೂ ಆಗಿರುವ ಒಬ್ಬ ಅಧಿಕಾರಿಯ ದರ್ಶನ ವನ್ನು ನಿನಗೆ ಮಾಡಿಸುವೆನು. ಅದರಿಂದ, ನೀನು ಮುಂದೆ ನಿನ್ನ ಸ್ನೇಹಿತ ನನ್ನು ಕಂಡುಹಿಡಿಯುವುದಕ್ಕೆ ಅನುಕೂಲಿಸುವುದು" ಎಂದು ಹೇಳಲು,

ಪ್ರಮದೆಯು ಅತ್ಯಾಸಂದದಿಂದ ಎದ್ದು ಹಿತ್ತಿಲಿಗೆ ಹೋಗಿ ಮುಖ ಮಾರ್ಜನಾದಿಗಳನ್ನು ತೀರಿಸಿಕೊಂಡು ಬಂದಳು. ಅಷ್ಟರಲ್ಲಿ ಕುಂತಲೆಯೂ ತನ್ನ ಕೆಲಸಗಳನ್ನು ಮುಗಿಸಿ, ಹೊರಡಲು ಸಿದ್ಧಳಾದಳು. ಇಬ್ಬರೂ ಮನೆಯನ್ನು ಬಿಟ್ಟು ಹೊರಟು, ಒಂದು ಸಣ್ಣ ಬೀದಿ, ಇನ್ನೊಂದು ದೊಡ್ಡ ಕೇರಿ, ಮತ್ತೊಂದು ಚಿಕ್ಕ ಓಣಿ, ಮಗುದೊಂದು ದೊಡ್ಡ ಓಣಿ—ಹೀಗೆ ವಕ್ರಾಕಾರವಾಗಿ ಸುತ್ತುತ್ತ, ಸುಮಾರು ಎರಡು ಗಂಟೆಯ ಕಾಲ ಕಳೆದಮೇಲೆ, ಒಂದು ದೊಡ್ಡ ಮಹಡಿಯ ಮನೆಯ ಬಳಿಗೆ ಬಂದರು. ಆ ಮನೆಯು ನೋಡುವುದಕ್ಕೆ ವಿಶಾಲವಾಗಿ ಕಂಡರೂ ಅಷ್ಟು ಪ್ರಶಸ್ತವಾಗಿರಲಿಲ್ಲ; ಹೊರ ಬಾಗಿಲು ಹಾಕಿದ್ದಿತು; ಕೆಲವು ಕಿಟಕಿಗಳು ಮಾತ್ರ ತೆರೆದಿದ್ದುವು; ಬಾಗಿಲಲ್ಲಿ ಕಾವಲುಗಾರರು ಯಾರೂ ಇರಲಿಲ್ಲ. ಇದನ್ನು ನೋಡಿ ಪ್ರಮದೆಗೆ ಆಶ್ಚರ್ಯವಾಗಿ ಕುಂತಲೆಯನ್ನು ನೋಡಿ, "ಅಮ್ಮಾ, ಇದೇನು ವಿಪರೀತ? ಬೆಳಗಾಗಿ ಆಗಲೇ ಎರಡು ಗಂಟೆಯ ಹೊತ್ತೇರಿದೆ. ಆದರೂ ಈ ಸಾಹೇಬರ ಮನೆಯಲ್ಲಿ ಯಾರೂ ಎಚ್ಚತ್ತಿರುವುದಿಲ್ಲವಲ್ಲಾ! ಇದೇನೋ ಪರಮಾಶ್ಚರ್ಯವಾಗಿದೆ" ಎಂದಳು. ಕುಂತಲೆಯು, "ಅಯ್ಯಾ! ಇದೆಲ್ಲ ಶ್ರೀಮಂತರ ಮನೆಯ ಪದ್ಧತಿ; ನಿನಗೆ ಇಲ್ಲಿಯ ವಿಷಯಗಳು ಇನ್ನೂ ತಿಳಿಯವು; ಸ್ವಲ್ಪ ದಿವಸಗಳು ಇಲ್ಲಿಯೇ ಇದ್ದರೆ ಎಲ್ಲವೂ ಗೊತ್ತಾಗುವುದು" ಎಂದು ಹೇಳಿ ಮಹಾ ದ್ವಾರದ ಬಾಗಿಲನ್ನು ಬಲವಾಗಿ ತಟ್ಟಿದಳು. ಎರಡು ಮೂರು ಬಾರಿ ತಟ್ಟಿದರೂ ಯಾರೂ ಬರಲಿಲ್ಲ; ಆದರೆ ಆ ಮನೆಯ ಒಂದು ಕಿಟಕಿಯಲ್ಲಿ ಎರಡು ಸ್ತ್ರೀವ್ಯಕ್ತಿಗಳು ಕಾಣಿಸಿಕೊಂಡು, "ಯಾರು? ಅಮ್ಮಾ ಜಾನ್!" ಎಂದು ಹೇಳುತ್ತ ಒಳಗೆ ಬರಲು ಸನ್ನೆಮಾಡಿದರು. ಕುಂತಲೆಯು ಅವರಿಗೇನೋ ಹೇಳಬೇಕೆಂಬ ಆತುರದಲ್ಲಿದ್ದರೂ ಅದನ್ನು ತೋರಗೊಡದೆ ತಾನೂ ಏನೋ ಒಂದು ಸಂಜ್ಞೆಯನ್ನು ಮಾಡಿದಳು. ಕೂಡಲೆ ಅವರಿಬ್ಬರೂ ಕಿಟಕಿಯನ್ನು ಮುಚ್ಚಿಕೊಂಡು ಒಳಗೆ ಹೊರಟುಹೋದರು. ಪ್ರಮದೆಯು ಜನಶೂನ್ಯವಾದ ಆ ಮನೆಯನ್ನು ಬೆರಗಾಗಿ ನೋಡುತ್ತಿರುವಲ್ಲಿ ಕುಂತಲೆಯು, "ಅಯ್ಯಾ, ನೀನು ಹಾಗೆ ನೋಡುವುದು ಉಚಿತವಲ್ಲ

ನೀನಿನ್ನೂ ಹೊಸಬ; ಯಾವ ಯಾವ ಸ್ಥಳಗಳಲ್ಲಿ ಹೇಗೆ ಹೇಗೆ ನಡೆದು ಕೊಳ್ಳಬೇಕೋ ಅದು ನಿನಗೆ ತಿಳಿಯದು'' ಎಂದಳು. ಯಾವ ಉದ್ದೇಶ ದಿಂದ ಕುಂತಲೆಯು ಈ ಮಾತನ್ನಾಡಿದಳೆಂಬುದು ಪ್ರಮದೆಗೆ ತಿಳಿಯದೆ ಹೋಗಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ದಾಸಿಯೊಬ್ಬಳು ಬಂದು ಬಾಗಿಲನ್ನು ತೆರೆದಳು. ಕುಂತಲೆಯು ಅವಳನ್ನು ಕುರಿತು, ''ಏನೆ! ಎಷ್ಟು ಹೊತ್ತು ಬಾಗಿಲು ತೆರೆಯುವುದು?'' ಎಂದು ಗುಪ್ತವಾಗಿ ಕಣ್ಣುಸನ್ನೆ ಮಾಡಿದಳು.

ದಾಸಿ.— ಅಮ್ಮಾ, ನಾನೇನು ಮಾಡಲಿ? ನನ್ನ ಕೆಲಸವೇ ನನಗೆ ಸಾಕಾಗಿದೆ.

ಕುಂತಲೆ.—ಸರದಾರರು ಎಚ್ಚತ್ತಿರುವರೋ?

ದಾಸಿ.—ಆಹಾ! ಆಗಲೇ ಬಂದು ದಿವಾನಖಾನೆಯಲ್ಲಿ ಕುಳಿತಿರು ವರು.

ತರುವಾಯ, ಕುಂತಲೆಯು ವೇಷಧಾರಿಯನ್ನು ಕುರಿತು, ''ಮಗೂ! ಸರದಾರರು ಬಹು ಗಾಂಭೀರ್ಯವುಳ್ಳವರು; ಅವರನ್ನು ನೋಡಿ ಭಯಪಡಬೇಡ; ವಿನಯದಿಂದ ವರ್ತಿಸು. ಅವರು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡು; ಬಾ, ಒಳಗೆ ಹೋಗೋಣ'' ಎಂದು ಹೇಳಲು, ಪ್ರಮದೆಯ ಮನಸ್ಸಿಗೆ ಏನೋ ತಿಳಿಯದ ಭಯ ಹುಟ್ಟಿತು. ಕುಂತಲೆಯು ವೇಷಧಾರಿಯನ್ನು ಮುಂದಿಟ್ಟುಕೊಂಡು ಆ ಮನೆಯನ್ನು ಪ್ರವೇಶಿಸಿದಳು. ಮಹಾ ದ್ವಾರದಿಂದ ಮುಂದಕ್ಕೆ ಬಂದ ಕೂಡಲೆ ವಿಶಾಲವಾದ ಅಂಗಳ; ಅದು ಅಷ್ಟು ಚೊಕ್ಕಟವಾಗಿರಲಿಲ್ಲ. ಮುಂದೆ ಒಂದು ಎತ್ತರವಾದ ಜಗುಲಿ, ಅದರ ಮುಂದೆ ಒಂದು ಬಾಗಿಲು. ಆ ಬಾಗಿಲನ್ನು ದಾಟಿದರೆ ಒಂದು ಪಡಸಾಲೆ, ಅದರ ಎಡ ಮಗ್ಗುಲಲ್ಲಿ ಒಂದು ಪರದೆಯು ಹಾಕಿದ್ದಿತು. ಆ ಪರದೆಯನ್ನು ಓರೆ ಮಾಡಿಕೊಂಡು ಕುಂತಲೆಯು ಮುಂದೆ ಹೊರಡಲು, ಪ್ರಮದೆಯೂ ಅವಳನ್ನನುಸರಿಸಿ ದಳು. ಪುನಃ ಅಲ್ಲೊಂದು ಬಾಗಿಲು; ಅದರ ಬಳಿಯಲ್ಲಿ ದಾಸಿ ಯೊಬ್ಬಳು ನಿಂತಿದ್ದಳು. ಕುಂತಲೆಯು ಆ ದಾಸಿಯ ಕಿವಿಯಲ್ಲಿ ಏನೇನೊ

ಹೇಳಿದ ಕೂಡಲೆ ಅವಳು ಒಳಗೆ ಹೋಗಿ ಬಂದು, "ಒಳಗೆ ದಯಮಾಡಿಸ ಬಹುದು" ಎಂದಳು. ಕುಂತಲೆಯೂ ವೇಷಧಾರಿಯೂ ಒಳಗೆ ಪ್ರವೇಶಿಸಿದರು. ಅಲ್ಲಿ ಸುಗಂಧ ದ್ರವ್ಯಗಳ ವಾಸನೆಯು ಘಮಘಮಿಸುತ್ತಿದ್ದಿತು; ನಾನಾ ವಿಧವಾದ ಚಿತ್ರಪಟಗಳು ಗೋಡೆಗೆ ತೂಗಹಾಕಿದ್ದುವು; ನೆಲದ ಮೇಲೆ ರತ್ನಗಂಬಳಿ ಹಾಸಿದ್ದಿತು. ಆ ರತ್ನಗಂಬಳಿಯ ಮೇಲೆ, ಒಂದು ಪಕ್ಕಕ್ಕೆ ಹಾಕಿದ್ದ ಗಾದಿಯಲ್ಲಿ, ದಿಂಬುಗಳಿಗೆ ಒರಗಿಕೊಂಡು ಶ್ರೀಮಂತನಂತೆ ಕಾಣುತ್ತಿದ್ದ ಒಬ್ಬ ವೃದ್ಧನು ಅಟ್ಟಹಾಸದಿಂದ ಕುಳಿತಿದ್ದನು. ಒಬ್ಬ ದಾಸಿಯು ಚಿನ್ನದ ಹಿಡಿ ಹಾಕಿದ್ದ ಬೀಸಣಿಗೆಯನ್ನು ಹಿಡಿದು ಪಕ್ಕದಲ್ಲಿ ನಿಂತು ಗಾಳಿ ಬೀಸುತ್ತಿದ್ದಳು. ಕುಂತಲೆಯು ಆತನ ಮುಂದೆ ಬಂದು ನಮ್ರ ಭಾವದಿಂದ ನೆಲಮುಟ್ಟಿ ಮೂರು ಸಾರಿ ನಮಸ್ಕಾರ ಮಾಡಿದಳು; ಪ್ರಮದೆಯೂ ಅದರಂತೆಯೇ ನಡೆದಳು. ಆ ವೃದ್ಧ ಶ್ರೀಮಂತನು ಅವರ ವಂದನೆಗಳನ್ನು ಅತ್ಯಾದರದಿಂದ ಸ್ವೀಕರಿಸಿ, "ಯಾರು? ಓಹೋ! ನಮ್ಮ ಕುಂತಲಮ್ಮ! ಇದೇನು? ಬಹಳ ಅಪರೂಪವಾಗಿ ಬಂದಿರಿ? ಇವರು ಯಾರು?" ಎಂದನು.

ಕುಂತಲೆ.—ಈ ತರುಣನು ಮಧುರಾ ಪಟ್ಟಣದವನು; ತಮ್ಮ ಬಳಿಗೆ ಯಾವುದೋ ಒಂದು ಕಾರ್ಯಾರ್ಥವಾಗಿ ಬಂದಿರುವನು. ಅವನಿಗೆ ಇಲ್ಲಿ ಪರಿಚಯಸ್ಥರು ಯಾರೂ ಇಲ್ಲದುದರಿಂದ, ನಿನ್ನೆಯ ದಿನ ಅಕಸ್ಮಾತ್ತಾಗಿ ನನ್ನ ಪರಿಚಯವಾಯಿತು. ಆದುದರಿಂದ ಆತನನ್ನು ಸಂಗಡ ಕರೆತಂದಿರುವೆನು. ತಾವು ದಯವಿಟ್ಟು ತಮ್ಮ ಉದಾರಾಶ್ರಯವನ್ನು ದಯಪಾಲಿಸಬೇಕು.

ವೃದ್ಧ.—ಓಹೋ! ಅಗತ್ಯವಾಗಿ ಆಗಬಹುದು. ಸರದಾರರೇ, ತಾವು ಯಾವ ಕಾರ್ಯಾರ್ಥವಾಗಿ ಬಂದಿರುವಿರಿ?

ಕುಂತಲೆ.—(ನಮಸ್ಕಾರ ಮಾಡಿ) ಸ್ವಾಮಿ! ನನಗೆ ಹೊರಡುವುದಕ್ಕೆ ಅಪ್ಪಣೆಯಾಗಬೇಕು; ಬೇರೆ ಕೆಲಸವಿದೆ.

ವೃದ್ಧ.—ಓಹೋ! ಇಷ್ಟು ಆತುರವೇಕೆ? ಸ್ವಲ್ಪ ಕುಳಿತುಕೊಳ್ಳಿರಿ.

ಕುಂತಲೆ.—ಇಲ್ಲ, ಅವಕಾಶ ನೋಡಿಕೊಂಡು ಪುನಃ ಬರುವೆನು; ಈಗ ಸ್ವಲ್ಪ ಕೆಲಸವಿದೆ.

ಹೀಗೆಂದು ಹೇಳಿ ಕುಂತಲೆಯು ಅಲ್ಲಿಂದ ಹೊರಟುಹೋದಳು.

ವೃದ್ಧ.—(ವೇಷಧಾರಿಯೊಡನೆ) ಇನ್ನು ನಿಮ್ಮ ಕಾರ್ಯವಾವುದು? ಸಂಕೋಚವಿಲ್ಲದೆ ಹೇಳಿರಿ.

ಪ್ರಮದೆ.—ನನ್ನ ಆಪ್ತ ಸ್ನೇಹಿತನು ಇಂದಿಗೆ ಒಂದೂವರೆ ತಿಂಗಳ ಹಿಂದೆ ಕಾರಣಾಂತರದಿಂದ ನನ್ನ ಮೇಲೆ ಕೋಪಗೊಂಡು ಹೊರಟು ಹೋದನು. ಅಂದಿನಿಂದಲೂ ನಾನು ಆತನನ್ನು ಹುಡುಕುತ್ತ ಬರುವಲ್ಲಿ, ಆತನು ಮಹಾರಾಜನಾದ ಬಾಬರಷಹನ ಬಳಿಯಲ್ಲಿ ಉದ್ಯೋಗಸ್ಥನಾಗಿರುವನೆಂದು ತಿಳಿದು, ಇಲ್ಲಿಗೆ ನಿನ್ನೆಯ ದಿವಸ ಬಂದು ಕುಂತಲಮ್ಮನವರ ಮನೆಯಲ್ಲಿ ರಾತ್ರಿಯನ್ನು ಕಳೆದೆನು. ಆ ಪುಣ್ಯಾತ್ಮಳು ತಮ್ಮ ಮೂಲಕ ನನ್ನ ಸ್ನೇಹಿತನ ಸಂದರ್ಶನ ಮಾಡಿಸುವುದಕ್ಕೆ ಸಹಾಯ ಮಾಡುವೆನೆಂದು ಹೇಳಿ, ನನ್ನನ್ನು ಇಲ್ಲಿಗೆ ಕರೆತಂದಳು. ತಾವು ದಯವಿಟ್ಟು ಅನಾಥನಾದ ನನಗೆ ಸಹಾಯ ಮಾಡಬೇಕು.

ಹೀಗೆಂದು ಹೇಳಿ ಪ್ರಮದೆಯು ಆನಂದಸಿಂಹನ ಹೆಸರು, ಆಕಾರ ಮುಂತಾದುವುಗಳನ್ನು ವಿವರಿಸಿದಳು. ವೃದ್ಧನು ಮುಗುಳ್ನಗೆ ನಗುತ್ತ, ಓಹೋ! ಗೊತ್ತಾಯಿತು; ನೀನು ಹೇಳುವುದೆಲ್ಲವೂ ಅಕ್ಷರಶಃ ನಿಜವೋ?'' ಎಂದು ಕೇಳಿ, ವಕ್ರ ದೃಷ್ಟಿಯಿಂದ ವೇಷಧಾರಿಯನ್ನು ಪರೀಕ್ಷಿಸುತ್ತಿದ್ದನು. ಪ್ರಮದೆಯು ಇದರಿಂದ ಸ್ವಲ್ಪ ಚಕಿತಳಾದರೂ ಕೂಡಲೆ ಧೈರ್ಯವನ್ನು ತಂದುಕೊಂಡು, ''ಅದಕ್ಕೆ ಸಂಶಯವೇನು? ಎಲ್ಲವೂ ನಿಶ್ಚಯವಾದುದೇ ಸರಿ'' ಎಂದಳು. ವೃದ್ಧನು ವ್ಯಂಗ್ಯವಾಗಿ ನಗುತ್ತ, ಮಧ್ಯೇ ಮಧ್ಯೇ ಕೆಮ್ಮುತ್ತ, ''ನಾನು ಯಾರೆಂಬುದು ತಿಳಿಯದೋ? ನನ್ನ ಮುಂದೆ ಈ ಮರುಳಾಟಗಳೆಲ್ಲ ಎಂದಿಗೂ ನಡೆಯಲಾರವು. ನನಗೆ ಮಂಕು ಬೂದಿಯನ್ನೆರಚಲು ಬಂದಿರುವೆಯೊ? ನೀನು ಪುರುಷ ವೇಷವನ್ನು ಧರಿಸಿದ್ದರೂ ಸ್ವಭಾವ ಸಿದ್ಧವಾದ ನಿನ್ನ ಸ್ತ್ರೀತ್ವವನ್ನು ಎಂದಿಗಾದರೂ ಮುಚ್ಚಲಾಗುವುದೆ?

ನೀನು ನಿನ್ನ ಪತಿಯನ್ನಲ್ಲವೆ ಅರಸುತ್ತ ಹೊರಟಿರುವುದು? ಗುಟ್ಟು ರಟ್ಟಾಯಿತೆಂದು ಗಾಬರಿಪಡಬೇಡ. ನಿನ್ನ ಪತಿಯೂ ಇಲ್ಲಿಯೇ ಇರುವನು. ನಾನು ಅವನನ್ನು ನೀನಿರುವಲ್ಲಿಗೇ ಕರೆಯಿಸುವೆನು. ಈಗ ನೀನು ನಮ್ಮ ಅಂತಃಪುರದಲ್ಲಿ ನಿನ್ನ ನಿಜರೂಪದಿಂದಲೇ ಇರು; ಭಯವಿಲ್ಲ'' ಎಂದು ಬೀಸಣಿಗೆಯವಳನ್ನು ಕುರಿತು, ''ಚಂದಿರೆಯನ್ನು ಬರಹೇಳು'' ಎಂದು ಅಪ್ಪಣೆಮಾಡಿದನು. ದಾಸಿಯು ಒಳಗೆ ಹೋದ ಸ್ವಲ್ಪ ಹೊತ್ತಿನಲ್ಲಿಯೇ, ಸುಮಾರು ಹದಿನಾರು ವರ್ಷದ ಸುಂದರಿಯೊಬ್ಬಳು ಅಲಂಕಾರ ಮಾಡಿಕೊಂಡು ಲಜ್ಜಾಹೀನಳಾದ ಗಂಡುಬೀರಿಯಂತೆ ಒಯ್ಯಾರದಿಂದ ಹಜ್ಜೆ ಹಾಕುತ್ತ, ಮುಖದಲ್ಲಿ ಮಂದಹಾಸವನ್ನು ಬೀರುತ್ತ, ಸೂಳೆಯಂತೆ ಮೈ ಕುಲುಕಿಸುತ್ತ ಬಂದು ನಿಂತು, ತಾನು ಹೊದೆದುಕೊಂಡಿದ್ದ ಕೇಸರೀ ಬಣ್ಣದ ಶಾಲನ್ನು ಮೇಲಿಂದ ಮೇಲೆ ಸರಿಮಾಡಿಕೊಳ್ಳುವ ಒನಪಿನಲ್ಲಿ ತನ್ನ ಅಂಗಾಂಗಗಳು ಇತರರಿಗೆ ಸ್ಪಷ್ಟವಾಗಿ ತೋರುವಂತೆ ನೇವರಿಸಿಕೊಳ್ಳುತ್ತ, ತನ್ನ ಒಡವೆಗಳ ಹೊಳೆಪನ್ನು ಬಾರಿ ಬಾರಿಗೂ ತೋರ್ಪಡಿಸುತ್ತ ಬಂದು ನಿಂತು, ''ಬಾಬಾ! ಏನು ಅಪ್ಪಣೆ?'' ಎಂದು ನಾಟಕದಲ್ಲಿಯ ನಟಿಯ ಪಾತ್ರದಂತೆ ನಮಸ್ಕರಿಸಿ ನಿಂತುಕೊಂಡಳು.

ಪ್ರಮದೆಯು ಇಂತಹ ಉಚ್ಛೃಂಖಲ ವೃತ್ತಿಯನ್ನು ಸ್ತ್ರೀಯರಲ್ಲಿ ಎಂದಿಗೂ ನೋಡಿರಲಿಲ್ಲ. ಇವಳ ಅಟ್ಟಹಾಸವನ್ನು ನೋಡಿದ ಕೂಡಲೆ ಆಕೆಯ ಮನಸ್ಸಿನಲ್ಲಿ ಏನೇನೋ ದುರ್ಭಾವನೆಗಳುಂಟಾದುವು: ''ಸಾಕ್ಷಾತ್ ತಂದೆಯೇ ಎದುರಿನಲ್ಲಿರುವಾಗ ಇಂತಹ ನಿರ್ಲಜ್ಜಾ ಭಾವವೆ! ಅಬ್ಬಬ್ಬಾ! ಈ ತಂದೆಯು ಎಂತಹ ಮನುಷ್ಯನೊ? ಇವಳು ಎಂತಹ ಮಗಳೊ? ಭಗವಂತನೇ ಬಲ್ಲನು'' ಎಂದೆಂದುಕೊಂಡಳು. ವೃದ್ಧ ಮಹಾಶಯನು, ''ಚಂದಾ! (ಪ್ರಮದೆಯನ್ನು ತೋರಿಸಿ) ಇಗೋ! ಇವರನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗು; ಪುರುಷನೆಂದು ಗಾಬರಿಪಡಬೇಡ; ಪುರುಷ ವೇಷಧಾರಿಯಾದ ತರುಣಿ! ಒಳಗೆ ಕರೆದುಕೊಂಡು ಹೋಗಿ ಆಕೆಗೆ ಎಲ್ಲ ಅನುಕೂಲ್ಯಗಳನ್ನು ಒದಗಿಸಿಕೊಡು'' ಎಂದು ಹೇಳಿ, ಪ್ರಮದೆಯನ್ನು ಕುರಿತು, ''ಅಮ್ಮಾ, ಒಳಗೆ ಹೋಗು; ದೇವರು

ನಿನಗೆ ಮಂಗಳವನ್ನುಂಟುಮಾಡಲಿ" ಎಂದನು. ಪ್ರಮದೆಯು ದಿಕ್ಕು ತೋರದ ಹರಿಣಿಯಂತೆ ನಿಂತಿರುವಲ್ಲಿ, ಚಂದಿರೆಯು ದುಡು ದುಡನೆ ಓಡಿಬಂದು ಪ್ರಮದೆಯ ಹೆಗಲ ಮೇಲೆ ಕೈಹಾಕಿಕೊಂಡು ಕರೆದು ಕೊಂಡು ಹೋಗುತ್ತ, "ನೀನು ಪುರುಷನಲ್ಲವೆ? ಬರಿಯ ವೇಷಧಾರಿ! ನಿಜವಾಗಿಯೂ ಪುರುಷನೇ ಆಗಿದ್ದರೆ?" ಎಂದು ಹೇಳಿ ವಿಲೋಲ ಕಟಾಕ್ಷವನ್ನು ಬೀರಿ ಮೆಲ್ಲಗೆ ನುಡಿದಳು. ಒಂದೆರಡು ಬಾಗಿಲು ದಾಟಿದ ಮೇಲೆ ಚಂದಿರೆಯು ಪುನಃ ಅಲ್ಲಿಲ್ಲ ತಿರುತಿರುಗಿ ನೋಡಿ ಯಾರೂ ಇಲ್ಲದಿರುವುದನ್ನು ಕಂಡು ಅವಳನ್ನು ಆಲಿಂಗನಮಾಡಿ ಗಲ್ಲವನ್ನು ಹಿಡಿದು, "ನೀನು ವೇಷದಲ್ಲಿಯೇ ಇಷ್ಟು ಮನೋಹರವಾಗಿರುವೆ; ನಿಜವಾಗಿಯೂ ಪುರುಷನೇ ಆಗಿದ್ದರೆ ಎಷ್ಟು ಆನಂದವನ್ನುಂಟುಮಾಡು ತ್ತಿದ್ದೆಯೊ?" ಎಂದಳು. ಪ್ರಮದೆಯು ಅವಳ ಕೈಯನ್ನು ಬಿಡಿಸಿಕೊಂಡು ದೂರಕ್ಕೆ ಸರಿದು, "ಅಯ್ಯೋ ಇದೇನಮ್ಮಾ! ಇಷ್ಟು ವಿಪರೀತ! ಇದು ಕುಲೀನ ಸ್ತ್ರೀಯರಿಗೆ ಯೋಗ್ಯವಾದುದಲ್ಲ" ಎಂದಳು. ಚಂದಿರೆಯು ಇದಕ್ಕೇನೂ ಪ್ರತ್ಯುತ್ತರ ಹೇಳದೆ ಸಯವಾಗಿ ಹಾಸ್ಯಮಾಡುತ್ತ ನಕ್ಕಳು. ಪ್ರಮದೆಗೆ ಆ ನಗುವಿನಿಂದ ಸಂತೋಷವಾಯಿತೊ ಬೇಸರ ವಾಯಿತೊ ಹೇಳಬೇಕಾದುದಿಲ್ಲ.

ಇತ್ತ, ದಿವಾನಖಾನೆಯಿಂದ ಮೊದಲು ಯಾವುದೋ ಒಂದು ನೆವದಿಂದ ಹೊರಟುಹೋಗಿದ್ದ ಕುಂತಲಮ್ಮನು ಪುನಃ ಅಲ್ಲಿಗೆ ಬಂದಳು. ವ್ಯಜನ ಧಾರಿಣಿಯೂ ವೃದ್ಧ ಸರದಾರನೂ ಕುಂತಲೆಯೂ ಸೇರಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ಗಹಗಹಿಸಿ ನಗುವುದಕ್ಕಾರಂಭಿಸಿದರು. ಕುಂತಲೆಯು ವೃದ್ಧನ ಸಮೀಪಕ್ಕೆ ಬಂದು, "ಇನ್ನು ಈ ವೇಷವು ಸಾಕು; ನಿನ್ನ ನಿಜ ರೂಪವನ್ನು ತೋರಿಸು" ಎಂದಳು. ವೃದ್ಧ ಸರ ದಾರನಾಗಿದ್ದ ವ್ಯಕ್ತಿಯ ಗಡ್ಡ ಮೀಸೆಗಳೂ ಗಂಡುಡುಪೂ ತೊಲಗಿ ಹೋಗಿ, ಆ ವ್ಯಕ್ತಿಯು ಒಂದು ಪ್ರೌಢ ಸ್ತ್ರೀಮೂರ್ತಿಯಾಗಿ ಪರಿಣಮಿ ಸಿತು. ಮರಳಿ ನಗುವಿನ ಕೋಲಾಹಲವೆದ್ದಿತು. ಅದು ಶಾಂತವಾದ ಮೇಲೆ ಆ ಸ್ತ್ರೀ ಮೂರ್ತಿಯು, "ಅಮ್ಮಾಜಾನ್! ಒಳ್ಳೆಯ ಉಪಾಯ ದಿಂದ ಹಿಡಿದು ತಂದಿರುವೆ; ನಿನ್ನೆಯ ದಿನ ನೀನು ಹೇಳಿದಂತೆ ಕಾರ್ಯ

ಸಿದ್ಧಿಯಾಯಿತು; ನನಗೆ ಬಹಳ ಸಂತೋಷ, ಹುಡುಗಿಯು ಬಹಳ ಸುಂದರಿ'' ಎಂದಳು. ಅದಕ್ಕೆ ಕುಂತಲೆಯು, "ನನ್ನ ಪಾಶಕ್ಕೆ ಸಿಕ್ಕು ಬಿದ್ದ ಮೇಲೆ ತಪ್ಪಿಸಿಕೊಂಡು ಹೋಗುವುದೆಂದರೇನು? ನನ್ನ ಕಾರ್ಯ ವಾಯಿತಷ್ಟೆ? ಇಷ್ಟರಲ್ಲಿಯೇ ಚಂದಿರೆಯು ಅವಳನ್ನು ತನ್ನ ದಾರಿಗೆ ಎಳೆದುಕೊಂಡಿರಬಹುದು. ಇನ್ನು ನನಗೆ ಬರಬೇಕಾದ ಪ್ರತಿಫಲವು ಬರಲಿ'' ಎನ್ನಲು, ಸ್ತ್ರೀವ್ಯಕ್ತಿಯು, "ಆಹಾ! ಅದಕ್ಕೇನು? (ವ್ಯಜನ ಧಾರಿಣಿಯನ್ನು ಕುರಿತು) ಕುಂತಲಮ್ಮನಿಗೆ ಇಪ್ಪತ್ತು ಮೊಹರಾಗಳನ್ನು ತಂದು ಕೊಡು'' ಎಂದಳು. ಕೂಡಲೆ ಆ ಮೊತ್ತವು ಕುಂತಲಮ್ಮನ ಉಡಿಯಲ್ಲಿ ಬಿದ್ದಿತು.

ಕುಂತಲೆ.—ಆ ಹೊಸ ಹುಡುಗಿಯು ಸಾಧಾರಣ ಸ್ತ್ರೀಯಲ್ಲ, ಬಹಳ ಚದುರೆ.

ವ್ಯಜನ ಧಾರಿಣಿ.—ಎಷ್ಟೇ ಚದುರೆಯಾಗಿರಲಿ ನಮ್ಮ ಕೈಗೆ ಬಿದ್ದ ಮೇಲೆ ಅವಳ ಗರತಿತನಕ್ಕೆ ತಿಲಾಂಜಲಿಯಲ್ಲದೆ ಮತ್ತೇನು?

ಸ್ತ್ರೀ ವ್ಯಕ್ತಿ.—ಈ ದಿವಸವೇನೊ ಅವಳು ತನ್ನ ಪಾತಿವ್ರತ್ಯವನ್ನು ಕಳೆದುಕೊಳ್ಳಲೇ ಬೇಕು; ಇಂದೇ ಅದಕ್ಕೆ ಉದ್ಯಾಪನೆ. ನಾಳೆಯಿಂದ ಅವಳು ಏನು ಬೇಕಾದರೂ ಮಾಡಿಕೊಳ್ಳಲಿ.

ಕುಂತಲೆ.—ಸರಿ, ಸರಿ; ನನಗೆ ಅಪ್ಪಣೆಕೊಡಿರಿ, ಹೊರಡುವೆನು.

ಹೀಗೆಂದು ಹೇಳಿ ಕುಂತಲೆಯು ಹೊರಟುಹೋದಳು. ಪುನಃ ನಗುವಿನ ತರಂಗವೆದ್ದಿತು. ಅಂತೂ ಇಂತೂ, ಅಡವಿಯಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ ಪಕ್ಷಿಯು ಬೇಟೆಗಾರನ ಬಲೆಯಲ್ಲಿ ಸಿಕ್ಕುಬಿದ್ದು ಲೋಹ ಪಂಜರದಲ್ಲಿ ಕಟ್ಟುಬಿದ್ದಿತು.

## ಹತ್ತನೆಯ ಪರಿಚ್ಛೇದ

ಈ ಪ್ರಪಂಚದಲ್ಲಿ ಧನದಾಸೆಯು ಜನರಿಂದ ಮಾಡಬಾರದ ಕೆಲಸಗಳನ್ನೆಲ್ಲ ಮಾಡಿಸುವುದು. ಅತಿ ನೀಚವಾದ ಕಾರ್ಯವಾದರೂ ಅಂಥವರು ಗಣನೆಗೆ ತಾರರು. "ಸರ್ವೇ ಗುಣಾಃ ಕಾಂಚನಮಾಶ್ರಯಂತಿ", "ಹಣವೆಂದರೆ ಹೆಣವೂ ಬಾಯ್ಬಿಡುತ್ತದೆ"—ಇತ್ಯಾದಿ ಲೋಕೋಕ್ತಿಗಳು ಅಕ್ಷರಶಃ ನಿಜವಾದುವುಗಳು. ಧನದಾಶೆಯುಳ್ಳವನಿಗೆ, ತಾನು ಯಾವ ಕಾರ್ಯವನ್ನು ಕೈಕೊಂಡಿರುವೆನು? ಯಾವ ಮಾತನ್ನಾಡುತ್ತಿರುವೆನು? ಎಂಬ ವಿಷಯಗಳು ಸಾಮಾನ್ಯವಾಗಿ ಗಮನಕ್ಕೆ ಬರುವುದಿಲ್ಲ; ಯೋಗ್ಯಾಯೋಗ್ಯ ವಿಚಾರವೂ ಮನಸ್ಸಿಗೆ ಹೊಳೆಯುವುದಿಲ್ಲ. ಹೀಗೆ ನೀಚ ಕೃತ್ಯದಿಂದ ಗಳಿಸಿದ ದ್ರವ್ಯವಾದರೂ ಉಳಿಯುವ ಸಂಭವವುಂಟೆ? ಎಂದಿಗೂ ಇಲ್ಲ. ತಾತ್ಕಾಲಿಕವಾಗಿ ಹೇಗೋ ಲಭಿಸಿದ ಹಣವನ್ನು ನೋಡಿದ ಮಾತ್ರಕ್ಕೇ ಅಂಥವರಿಗೆ ಅತ್ಯಾನಂದವಾಗಬಹುದು; ಆದರೆ ಪರಿಣಾಮದಲ್ಲಿ ಯಾವ ಫಲವುಂಟಾಗುವುದೆಂಬುದನ್ನು ಮಾತ್ರ ಅವರು ಯೋಚಿಸುವುದೇ ಇಲ್ಲ. ಇಂತಹ ಹೇಯವಾದ ಕೃತ್ಯಗಳಿಂದ ದೊರೆಯುವ ದ್ರವ್ಯಕ್ಕೂ, ಅಂತಹ ದ್ರವ್ಯವನ್ನು ಸಂಪಾದಿಸುವವರ ಜನ್ಮಕ್ಕೂ ಧಿಕ್ಕಾರ!

ಚಂದಿರೆಯು ಪ್ರಮದೆಯನ್ನು ರಾಣೀವಾಸಕ್ಕೆ ಕರೆತಂದಳು. ಅಂತಃಪುರವು ಪ್ರತ್ಯೇಕವಾಗಿರದೆ ಆ ಮನೆಯಲ್ಲಿಯೇ ಒಂದು ಭಾಗದಲ್ಲಿದ್ದು, ಬಹಳ ರಮಣೀಯವಾಗಿ ಅಲಂಕರಿಸಿದ್ದಿತು. ಚಂದಿರೆಯ ಸಮವಯಸ್ಕರಾದ ಮೂರು ನಾಲ್ಕು ಮಂದಿ ತರುಣಿಯರು ಅಲಂಕಾರ ಕಾರ್ಯದಲ್ಲಿ ಪ್ರವೃತ್ತರಾಗಿದ್ದರು. ಚಂದಿರೆಯು ಪ್ರಮದೆಯೊಡನೆ ಬಂದುದನ್ನು ನೋಡಿ, ಅವರೆಲ್ಲರೂ ಎದ್ದು ಬೇರೆ ಬೇರೆ ಕಾರ್ಯಗಳಲ್ಲಿ ತೊಡಗಿದರು. ಒಬ್ಬಳು ಸಾರಂಗಿಯನ್ನು ತೆಗೆದುಕೊಂಡು ಬಾರಿಸಲಾರಂಭಿಸಿದಳು; ಇನ್ನೊಬ್ಬಳು ಅದಕ್ಕೆ ತನ್ನ ಕಂಠವನ್ನು ಸೇರಿಸಿ, ಮನೋಹರವಾಗಿ ಹಾಡಲುಪಕ್ರಮಿಸಿದಳು. ಮತ್ತೊಬ್ಬಳು ಮೃದಂಗವನ್ನು ಬಾರಿಸತೊಡಗಿದಳು. ಇದನ್ನೆಲ್ಲ ನೋಡಿ ಪ್ರಮದೆಗೆ ಮತ್ತಷ್ಟು ಆಶ್ಚರ್ಯವಾಯಿತು. ಚಂದಿರೆಯು ಅವಳನ್ನು ಒಂದು ಕೊಟ್ಟಡಿಗೆ

ಕರೆದುಕೊಂಡು ಹೋಗಿ ಸ್ತ್ರೀಯರಿಗುಚಿತವಾದ ಉಡುಪನ್ನು ಧರಿಸಲು ಕೊಟ್ಟು ಹೊರಟುಹೋದಳು.

ಪ್ರಮದೆಯು ಪುರುಷ ವೇಷವನ್ನು ತೆಗೆದುಹಾಕಿ ಅಂದವಾದ ಸೀರೆಯನ್ನುಟ್ಟು ತಕ್ಕ ಆಭರಣಗಳನ್ನು ತೊಟ್ಟಳು. ಮೊದಲೇ ಸ್ವಭಾವ ಸಿದ್ಧವಾದ ಸೌಂದರ್ಯ; ಅದಕ್ಕೆ ಅತ್ಯುತ್ತಮವಾದ ಅಲಂಕಾರಗಳ ಸಂಘಟನೆಯಾದರೆ ಹೇಳುವುದೇನು? ಚಿನ್ನಕ್ಕೆ ಪರಿಮಳ ವಿಟ್ಟಂತಾಯಿತು; ಮಲ್ಲಿಗೆಯರಳಿನ ಮೇಲೆ ಚಂದ್ರಿಕೆ ಹರಡಿದಂತಾಯಿತು; ಕಾಯಿಸಿ ಸಕ್ಕರೆ ಹಾಕಿದ ಹಾಲಿಗೆ ಕೇಸರಿಯನ್ನು ಬೆರಸಿದಂತಾಯಿತು; ಮೃಷ್ಟಾನ್ನ ಭೋಜನದ ಜೊತೆಗೆ ಅತ್ಯಮೂಲ್ಯವಾದ ಪಾರಿತೋಷಿಕವು ದೊರೆತಂತಾಯಿತು; ಪಲ್ಲವಿಸಿದ ವೃಕ್ಷವು ಫಲ ಭರಿತವಾದಂತಾಯಿತು; ಮಲ್ಲಿಗೆಯ ಹೂವನ್ನು ಗುಲಾಬಿಯ ಅತ್ತರಿನಲ್ಲಿ ಅದ್ದಿದಂತಾಯಿತು. ಪ್ರಮದೆಯು ಈ ರೀತಿಯಾಗಿ ಅಲಂಕಾರ ಮಾಡಿಕೊಂಡು ಹೊರಗೆ ಬಂದ ಕೂಡಲೆ, ಎದುರಿನಲ್ಲಿದ್ದ ನಿಲುಗನ್ನಡಿಯಲ್ಲಿ ಬಿದ್ದ ತನ್ನ ಪ್ರತಿಬಿಂಬವನ್ನು ನೋಡಿ ತಾನೇ ನಾಚಿಕೊಳ್ಳುವಂತಾಯಿತು. ಆಕೆಗೆ ಆಗ ಏನೇನೋ ಆಲೋಚನೆಗಳು ತಲೆದೋರಿದುವು: "ನಾನು ಮೋಸ ಹೋಗಿರಬೇಕು; ಇವರೆಲ್ಲರೂ ಕಪಟಿಗಳಲ್ಲವೆ? ಚಿಕ್ಕಂದಿನಲ್ಲಿ ನಾನು ಇಬ್ರಾಹಿಂ ಲೋಡಿಯ ಅರಮನೆಯ ಅಂತಃಪುರದಲ್ಲಿಯೇ ಬೆಳೆದೆನು. ಅಲ್ಲಿಯ ಸ್ತ್ರೀಯರು ಎಷ್ಟು ಸ್ವಾತಂತ್ರ್ಯ ಪ್ರಿಯರು! ಎಷ್ಟು ಚಾರ್ವಾಕರು? ಎಷ್ಟು ಉಚ್ಛೃಂಖಲ ವೃತ್ತಿಯುಳ್ಳವರು? ಆದರೆ ಇವರಿಗೂ ಅವರಿಗೂ ಅಜ ಗಜ ನ್ಯಾಯ! ಇದೇನೋ ವಿಚಿತ್ರವಾಗಿರುವುದು! ಏನಾದರೂ ಆಗಲಿ, ಇವರು ಯಾರಾದರೂ ಆಗಿರಲಿ; ಮುಖ್ಯವಾಗಿ ನನ್ನ ಕಾರ್ಯವು ಸಫಲವಾದರೆ ಸಾಕು; ನನ್ನ ಪತಿಯು ದೊರೆಯುವುದೇ ನನಗಾಗಬೇಕಾದ ಪರಮ ಲಾಭ. ಅದಕ್ಕೆ ಎಂತಹ ಜನರ ಸಹಾಯವಾದರೇನು?" ಎಂದುಕೊಂಡು ಪ್ರಮದೆಯು ಸಮಾಧಾನ ಮನಸ್ಕಳಾಗಿ ಚಂದಿರೆಯನ್ನು ಹುಡುಕಿಕೊಂಡು ಹೋದಳು. ಇಬ್ಬರೂ ಸೇರಿ ಲೋಕಾಭಿರಾಮವಾದ ಮಾತುಗಳನ್ನಾಡುತ್ತ ಕಾಲವನ್ನು ಕಳೆದರು.

ಅಲ್ಲಿದ್ದವರಲ್ಲೆಲ್ಲ ಚಂದಿರೆಯೇ ಸ್ವಲ್ಪ ಉತ್ತಮಳೆಂದು ಹೇಳಬೇಕು. ಅವಳು ಸ್ವೇಚ್ಛಾ ಪ್ರವರ್ತಿನಿಯಾದರೂ ಪ್ರಮದೆಯ ನೀತಿ ವಾಕ್ಯಗಳಿಂದ ಅವಳ ನಡತೆಯಲ್ಲಿ ಸ್ವಲ್ಪ ಮಾರ್ಪಾಡು ಉಂಟಾಯಿತು. ಪ್ರಮದೆಯು ಚಂದಿರೆಯನ್ನು ಕುರಿತು, ದಾಕ್ಷಿಣ್ಯಕ್ಕೊಳಗಾಗದೆ ವಿನಯದಿಂದ, "ಚಂದ್ರಾ, ಈ ರೀತಿಯಾದ ನಡೆವಳಿಕೆಯು ಕುಲೀನರಾದ ನಿಮಗೆ ಯೋಗ್ಯವಲ್ಲ. ನೀವೇನೋ ಇಲ್ಲಿ ಸ್ವತಂತ್ರರಾಗಿರಬಹುದು; ಆದರೆ ಈ ರೀತಿಯಾಗಿ ಕಣ್ಣು ತಿರುಗಿಸುವುದು, ಹುಬ್ಬು ಹಾರಿಸುವುದು, ನಾಚಿಕೆಯಿಲ್ಲದೆ ಗಹಗಹಿಸಿ ನಗುವುದು, ಒಯ್ಯಾರದಿಂದ ನಡೆಯುವುದು —ಇವೆಲ್ಲವೂ ಮರ್ಯಾದೆಯುಳ್ಳ ಸ್ತ್ರೀಯರಿಗೆ ಯೋಗ್ಯವಲ್ಲ. ಅಂಥವರಿಗೆ ಸುಶೀಲತೆ, ಲಜ್ಜಾ ಯುಕ್ತತೆ, ಪಾಪ ಭೀರುತೆ, ಗುರು ಹಿರಿಯರಲ್ಲಿ ಗೌರವ—ಇವೇ ಮುಂತಾದ ಸದ್ಗುಣಗಳೇ ಭೂಷಣ" ಎಂದು ಬೋಧಿಸಿದಳು. ಚಂದಿರೆಯ ಮನಸ್ಸು ಈ ಅಲ್ಪ ಬೋಧನೆಯಿಂದಲೇ ಸ್ವಲ್ಪ ಎಚ್ಚರಗೊಂಡು ಸದ್ಗುಣಗಳ ಕಡೆಗೆ ತಿರುಗಿತು. ಅವಳು, "ಅಕ್ಕಾ! ನೀವು ಹೇಳುವುದೇನೋ ನಿಜ; ಆದರೆ ನಾನು ಚಿಕ್ಕಂದಿನಿಂದಲೂ ಇದೇ ರೀತಿಯಾದ ನಡೆವಳಿಕೆಯಲ್ಲಿ ಬೆಳೆದಿರುವೆನು; ನನ್ನ ಸಹವಾಸವೇ ಅಂತಹದು."

ಪ್ರಮದೆ.—ಹಾಗೆಯೇ? ನನಗೆ ಸರಿಯಾಗಿ ಅರ್ಥವಾಗುವುದಿಲ್ಲ; ಹಾಗೆಂದರೇನು?

ಚಂದಿರೆಯು ಇದಕ್ಕೆ ಉತ್ತರ ಹೇಳುವುದನ್ನು ತಪ್ಪಿಸಿಕೊಂಡು, ಯಾವುದೋ ಕೆಲಸದ ನೆಪದ ಮೇಲೆ ಬೇರೆ ಕಡೆಗೆ ಹೊರಟುಹೋದಳು. ಚಂದಿರೆಯ ಮಾತನ್ನು ಕೇಳಿ ಪ್ರಮದೆಯು ಪುನಃ ಚಿಂತಾ ಮಗ್ನಳಾದಳು. "ಏನು! 'ಇದೇ ರೀತಿಯಾದ ನಡೆವಳಿಕೆಯಲ್ಲಿ ಬೆಳೆದಿರುವೆನು'—ಈ ಮಾತುಗಳಿಗೆ ಅರ್ಥವೇನು? ಕಲಿಸಿದವರು ಯಾರು? ಈ ಮನೆಯು ಯಾರದು? ಇಲ್ಲಿರುವ ಇತರ ಸ್ತ್ರೀಯರೂ ಇಷ್ಟು ನಿರ್ಲಜ್ಜರಾಗಿರಲು ಕಾರಣವೇನು?"—ಇವೇ ಮುಂತಾದ ಪ್ರಶ್ನೆಗಳು ಪ್ರಮದೆಯ ಮನಸ್ಸಿನಲ್ಲಿ ಪುನಃ ಪುನಃ ಹೊಳೆಯಲಾರಂಭಿಸಿದುವು. ಪಾಪ! ವೇಶ್ಯೆಯರನ್ನು ಎಂದೂ ನೋಡದ ಅವಳಿಗೆ ಇದೆಲ್ಲವೂ ಹೇಗೆ ಗೊತ್ತಾಗಬೇಕು? ಮಧ್ಯಾಹ್ನವು ಸಮಿಾಪಿಸಿತು. ಚಂದಿರೆಯು ಪ್ರಮದೆಯನ್ನು ಊಟಕ್ಕೆ

ಕರೆಯಲು ಬಂದಳು. ಪ್ರಮದೆಯು, "ನೀವು ಯಾವ ಮತದವರು?" ಎಂದು ಕೇಳಲು, "ನಾವು ಮುಸಲ್ಮಾನೀ ಧರ್ಮದವರು; ಈ ಮನೆಯಲ್ಲಿ ಜಾತಿ ಭೇದವೇನೂ ಇಲ್ಲ" ಎಂದು ಅವಳು ಉತ್ತರಕೊಟ್ಟಳು. ಪ್ರಮದೆಯು, "ಹಾಗಾದರೆ ನಾನು ಊಟ ಮಾಡುವುದಿಲ್ಲ; ಇದ್ದರೆ ಸ್ವಲ್ಪ ಹಾಲು ಕೊಡಿರಿ" ಎಂದಳು. ಹಾಗೆಯೇ ಆಗಲೆಂದು ಹೇಳಿ ಚಂದಿರೆಯು ಹಾಲನ್ನೂ ಕೆಲವು ಹಣ್ಣನ್ನೂ ತಂದುಕೊಟ್ಟು ಹೊರಟು ಹೋದಳು. ಪ್ರಮದೆಯು ಅದೇ ತನಗೆ ಮೃಷ್ಟಾನ್ನವಾಯಿತೆಂದು ಹಣ್ಣನ್ನು ತಿಂದು ಹಾಲನ್ನು ಕುಡಿದಳು. ಮನೆಯವರೆಲ್ಲರ ಊಟವೂ ಆಯಿತು. ಚಂದಿರೆಯು ಪುನಃ ಪ್ರಮದೆಯ ಬಳಿಗೆ ಬಂದು, ಇಬ್ಬರೂ ಸೇರಿ ಬೇರೊಂದು ಕಡೆಗೆ ಹೋಗಿ ಕುಳಿತುಕೊಂಡರು. ಪ್ರಮದೆಯು, "ಚಂದ್ರಾ, ನಾನೊಂದು ವಿಷಯವನ್ನು ಕೇಳಬೇಕೆಂದಿರುವೆನು; ನಿಜವನ್ನೇ ಹೇಳುವೆಯಾ?" ಎಂದು ಕೇಳಲು, ಚಂದಿರೆಯು ಸ್ವಲ್ಪ ಅಪ್ರತಿಭಳಾದಳು; ಅವಳಿಗೆ ಭಯವೂ ಆಶ್ಚರ್ಯವೂ ಒಂದೇ ಕಾಲದಲ್ಲುಂಟಾದುವು. ಇದನ್ನು ನೋಡಿ ಪ್ರಮದೆಯು ಪುನಃ, "ತಂಗೀ! ನಿನ್ನ ಮುಖವನ್ನು ನೋಡಿದರೆ ನೀನು ಚಿಕ್ಕಂದಿನಿಂದಲ್ಲ, ಈಚೀಚೆಗೆಯೇ ಈ ತೆರದ ಮಾರ್ಪಾಡನ್ನು ಹೊಂದಿರುವಳಂತೆ ತೋರುವುದು; ಮೊದಲಿನ ನಿನ್ನ ವೃತ್ತಿಯೇ ಬೇರೆಯಾಗಿದ್ದು, ಸಹವಾಸ ದೋಷದಿಂದ ಇಷ್ಟು ನಿರಂಕುಶ ಪ್ರವರ್ತಕಳಾಗಿರುವಂತೆ ಕಾಣುವುದು; ನಿಜವಲ್ಲವೆ? ಸತ್ಯವಾಗಿ ಹೇಳು: ಇದು ಯಾರ ಮನೆ? ಇಲ್ಲಿ ನಾಲ್ಕಾರು ಮಂದಿ ಸ್ತ್ರೀಯರಿರುವರಷ್ಟೆ! ಪುರುಷರೆಂದರೆ ನಿಮ್ಮ ತಂದೆಯೊಬ್ಬನೇ ಎಂದು ಕಾಣುವುದು. ನಿನ್ನ ಪತಿ ಯಾರು? ಈ ಮೂರು ನಾಲ್ಕು ಮಂದಿ ಸ್ತ್ರೀಯರು ನಿನಗೇನಾಗಬೇಕು? ಅವರ ಪತಿಗಳು ಎಲ್ಲಿರುವರು? ಈ ಸ್ತ್ರೀಯರೆಲ್ಲರೂ ಒಬ್ಬರಿಗಿಂತೊಬ್ಬರು ಅತಿಶಯವಾದ ಉಚ್ಛೃಂಖಲೆಯರಾಗಿರುವರಲ್ಲಾ! ಇದಕ್ಕೆಲ್ಲ ಅರ್ಥವೇನು?" ಎಂದು ಕೇಳಿದಳು.

ಚಂದಿರೆ.—ಅಮ್ಮಾ, ಇದೇನು ಹೀಗೆ ಹೇಳುತ್ತೀರಿ? ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ. **(ಎಡ ಬಲಗಳಲ್ಲಿ ನೋಡಿ)** ಈ ವಿಚಾರವಾಗಿ ನನಗೇನೂ ತಿಳಿಯದು.

ಪ್ರಮದೆ.—(ಗಾಂಭೀರ್ಯದಿಂದ) ಚಂದ್ರಾ! ನೀನು, "ಏನೂ ತಿಳಿಯದು" ಎಂಬ ಷಡಕ್ಷರೀ ಮಂತ್ರದ ವೇಷವನ್ನು ಧರಿಸಬೇಡ. ನೀನು ಏನೂ ತಿಳಿಯದ ಮೂಢಳಲ್ಲ, ಹಳ್ಳಿಯ ಕುರುಬಳಲ್ಲ; ನಿನ್ನ ಮುಖ ಲಕ್ಷಣವೇ ಅದನ್ನು ಹೇಳುವುದು.

ಚಂದಿರೆ.—ನನಗೇನು ಗೊತ್ತಿದೆ? ನಾನೇನು ಈ ಮನೆಗೆ ಯಜಮಾನಿಯೆ?

ಪ್ರಮದೆ.—ಪಾಪ! ಏನೇನೂ ಗೊತ್ತಿಲ್ಲ; ಇನ್ನೂ ಚಿಕ್ಕ ಹುಡುಗಿ; ನಾನು ಕೇಳಿದ ವಿಷಯ ಮಾತ್ರ ಬಿಟ್ಟು ಉಳಿದುದೆಲ್ಲವೂ ನಿನಗೆ ಗೊತ್ತಿದೆ! ಅಲ್ಲವೆ? ಚಂದ್ರಾ! ಮೋಸ ಮಾಡಬೇಡ; ನಿನ್ನನ್ನು ನನ್ನ ಸೋದರಿಯೆಂದು ತಿಳಿಯುವೆನು; (ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು) ನಿಜವಾಗಿ ಹೇಳು. ನಾನು ಈಗ ಯಾರ ಮನೆಯಲ್ಲಿ ಸಿಕ್ಕುಬಿದ್ದಿರುವೆನು? ಹೇಳು.

ಚಂದಿರೆ.—(ಪಿಸು ಮಾತಿನಲ್ಲಿ) ಅಮ್ಮಾ! ಈ ಮನೆಯಲ್ಲಿ ಕಂಬಗಳಿಗೂ ಗೋಡೆಗಳಿಗೂ ಸಹ ಕಿವಿಗಳಿರುವುವು; ನಾವು ಬಹಳ ಎಚ್ಚರಿಕೆಯಿಂದ ಮಾತನಾಡಬೇಕು.

ಪ್ರಮದೆ.—ಆಗಲಿ; ನನಗೆಲ್ಲವನ್ನೂ ತಿಳಿಸಬೇಕೆಂಬ ಇಚ್ಛೆಯು ನಿನಗಿದೆಯೋ?

ಚಂದಿರೆ.—ಇದೆ; ಆದರೆ........ಇಲ್ಲಿ ಆಗುವುದಿಲ್ಲ.

ಪ್ರಮದೆ.—ಇಲ್ಲಿ ಬೇಡವಾದರೆ ಬೇರೆ ಇನ್ನೆಲ್ಲಿಗಾದರೂ ಹೋಗಬಹುದಲ್ಲವೆ?

"ಹಾಗಾದರೆ ಕೊಂಚ ತಾಳು" ಎಂದು ಸ್ವಲ್ಪ ಹೊತ್ತು ಚಿಂತಿಸುತ್ತಿದ್ದು ಚಂದಿರೆಯು ಹೊರಗೆ ಹೊರಟುಹೋದಳು. ಪ್ರಮದೆಯು ಪುನಃ ಪೇಚಾಟದಲ್ಲಿ ಬಿದ್ದಳು; ಅವಳ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. "ಏನು? ನಿನ್ನೆಯ ರಾತ್ರಿ ನನ್ನನ್ನು ಅಷ್ಟು ಸತ್ಕರಿಸಿದ ಗರತಿಯು ನನ್ನನ್ನು ವಂಚಿಸಿರಬಹುದೆ? ಇಲ್ಲದಿದ್ದರೆ ಅವಳು ಏನೋ ನೆಪದಿಂದ ನನ್ನ ಎದೆಯನ್ನು ಮುಟ್ಟಿದುದೇಕೆ? ಅವಳು

ಎಂತಹ ಸ್ತ್ರೀಯೊ? ಅವಳ ಹೇಳಿಕೆಯಂತೆ ಈ ಮನೆಯು ಸರದಾರನ ದೇಯೋ?''—ಇವೇ ಮೊದಲಾದ ಕಲ್ಪನೆಗಳು ಪ್ರಮದೆಯ ಮನಸ್ಸಿನಲ್ಲಿ ತರಂಗ ತರಂಗವಾಗಿ ಬರಲಾರಂಭಿಸಿದುವು. ದಿಗಿಲು ಹುಟ್ಟಿತು; ತಾನು ತನ್ನ ಪತಿಯನ್ನು ಕಾಣುವೆನೆಂದು ಪ್ರಾತಃಕಾಲದಲ್ಲಿ ಎಷ್ಟು ಆನಂದ ಭರಿತಳಾಗಿದ್ದಳೋ, ಈ ಅಲ್ಪಾವಧಿಯಲ್ಲಿಯೇ ಆ ಭಾವಿ ಸುಖಗಳೆಲ್ಲ ಮಾಯವಾಗಿ, ಅಷ್ಟು ದುಃಖಾರ್ತಳಾದಳು. ತನ್ನ ಪತಿಯ ವಿಚಾರ ವೊಂದು ಕಡೆಗಿರಲಿ; ತನ್ನ ಮಾನ ಪ್ರಾಣಗಳನ್ನು ಉಳಿಸಿಕೊಂಡು ಇಲ್ಲಿಂದ ಬಿಡುಗಡೆ ಹೊಂದಿದರೆ ಸಾಕು ಎಂಬ ಆಲೋಚನೆಯೇ ರೂಢ ಮೂಲವಾಯಿತು. ಅಷ್ಟರಲ್ಲಿಯೇ, ಹೊರಗೆ ಹೋಗಿದ್ದ ಚಂದಿರೆಯು ಆನಂದವು ತುಂಬಿ ತುಳುಕುತ್ತಿದ್ದ ಮುಖದಿಂದ ಬಂದು, ''ಅಕ್ಕಾ! ಇದೇ ಸ್ಥಳವೇ ಚೆನ್ನಾಗಿದೆ; ಅವರೆಲ್ಲರೂ ಆಟ ಪಾಟಗಳಲ್ಲಿ ತೊಡಗಿರು ವರು; ಇನ್ನೂ ಬಹಳ ಹೊತ್ತಿನ ವರೆಗೂ ನಾವು ಮನ ಬಿಚ್ಚಿ ಮಾತ ನಾಡಬಹುದು; ಅವರು ಯಾರೂ ಇಲ್ಲಿಗೆ ಬರುವಂತಿಲ್ಲ. ನಿನಗೆ ಯಾವ ವಿಚಾರವನ್ನು ಹೇಳಬೇಕು? ತಡಮಾಡದೆ ಕೇಳು'' ಎಂದು ಪ್ರಮದೆಯ ಪಕ್ಕದಲ್ಲಿ ಬಂದು ಕುಳಿತಳು.

ಪ್ರಮದೆ.—ಈ ಮನೆಯು ಯಾರದು? ನಾನು ಯಾರ ಸಹವಾಸ ದಲ್ಲಿ ಸಿಕ್ಕುಬಿದ್ದಿರುವೆನು!

ಚಂದಿರೆ.—ಅಯ್ಯೋ ಹುಚ್ಚೀ! ನಿನಗೆ ಇನ್ನೂ ಲೋಕ ವ್ಯವಹಾರ ದಲ್ಲಿ ಏನೂ ಅನುಭವವೇ ಇಲ್ಲವೆಂದು ತೋರುವುದು. ನೀನು ನೀಚರಲ್ಲಿ ಅತಿ ನೀಚರಾದವರ ಸಹವಾಸದಲ್ಲಿ ಸಿಕ್ಕುಬಿದ್ದಿರುವೆ. ನಿನ್ನನ್ನು ಕರೆದು ಕೊಂಡು ಬಂದ ಆ ಹೆಂಗುಸೇ ನಿನ್ನನ್ನು ವಂಚಿಸಿರುವವಳು. ಇದು ಸರದಾರರ ಮನೆಯಲ್ಲ; ಒಂದು ವೇಶ್ಯಾ ಗೃಹ! ಸರದಾರನಂತೆ ಕುಳಿತಿದ್ದವಳು ಈ ಮನೆಯ ಯಜಮಾನಿ; ಗಂಡುಸಿನ ವೇಷವನ್ನು ಹಾಕಿಕೊಂಡಿದ್ದಳು.

ಪ್ರಮದೆ.—ಇದು ವೇಶ್ಯಾ ಗೃಹವೇ! ಅಯ್ಯೋ! ಮೋಸ ವಾಯಿತು. ಮುಂದೇನು ಮಾಡಲಿ!

ಚಂದಿರೆ.—ನಿಜವಾಗಿಯೂ ಇದು ವೇಶ್ಯಾಗೃಹ; ಅದರಲ್ಲಿಯೂ ಬಹಳ ನೀಚವಾದ ವೇಶ್ಯಾಗೃಹ. ನೀನು ಹೇಗೆ ಮೋಸಹೋದೆ ಎಂಬುದನ್ನು ನಾನು ಬಲ್ಲೆನು. ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು; ಆಮೇಲೆ, ಬೇಕಾದರೆ ಇಲ್ಲಿರು, ಬೇಡವಾದರೆ ಹೇಗಾದರೂ ತಪ್ಪಿಸಿಕೊಂಡು ಓಡಿಹೋಗು. ಆದರೆ ತಪ್ಪಿಸಿಕೊಂಡು ಹೋಗುವು ದೇನೂ ಸಾಧ್ಯವಾಗಿ ತೋರುವುದಿಲ್ಲ.

ಪ್ರಮದೆಯು ದೀರ್ಘನಿಶ್ವಾಸವನ್ನು ಬಿಟ್ಟು, "ಒಳ್ಳೆಯದು, ಎಲ್ಲ ವನ್ನೂ ವಿಸ್ತಾರವಾಗಿ ಹೇಳು" ಎನ್ನಲು, ಚಂದಿರೆಯು ಹೀಗೆ ಹೇಳ ತೊಡಗಿದಳು:—"ನೀನು ಪುರುಷ ವೇಷದಿಂದ ನಿನ್ನೆಯ ಸಾಯಂಕಾಲ ಬೀದಿಯಲ್ಲಿ ತಿರುಗುತ್ತಿರುವಾಗ ನೀಚಳಾದ ಆ ಹೆಂಗುಸು ನೀನೊಬ್ಬ ಪುರುಷನೆಂದೇ ಭಾವಿಸಿ, ನಿನ್ನಿಂದ ಏನಾದರೂ ಹಣವನ್ನು ಕಸುಕೊಳ್ಳ ಬೇಕೆಂಬ ಆಲೋಚನೆಯಿಂದ ನಿನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ನೀನು ಪುರುಷನೇ ಆಗಿದ್ದರೆ ನಿನ್ನೆಯ ರಾತ್ರಿಯೇ ನಿನ್ನನ್ನು ಇಲ್ಲಿಗೆ ಕರೆತರುತ್ತಿದ್ದಳು. ಅದು ವಿಪರೀತವಾದುದರಿಂದ ಚತುರಳಾದ ಆ ಧೂರ್ತಳು ನಿನ್ನ ಮಾತುಕತೆಗಳನ್ನು ನೋಡಿ ನೀನು ಸ್ತ್ರೀಯೆಂ ದೂಹಿಸಿ ಯಾವುದೋ ಒಂದು ನೆಪದಿಂದ ನಿನ್ನ ಎದೆಯನ್ನು ಮುಟ್ಟಿ ತನ್ನ ಸಂದೇಹವನ್ನು ನಿವಾರಿಸಿಕೊಂಡಳು. ನೀನು ಪುರುಷನಾಗಿದ್ದರೆ ನಿನ್ನೆಯ ರಾತ್ರಿಯೇ ನನಗೂ ನಿನಗೂ ಸಂಬಂಧವುಂಟಾಗುತ್ತಿದ್ದಿತು. ನೀನು ಈ ಊರಿಗೆ ಯಾವ ಕಾರಣದಿಂದ ಬಂದಿರುವೆಯೆಂಬುದನ್ನು ತಿಳಿದುಕೊಂಡು, ಆ ನೀಚಳು ನೀನು ಮಲಗಿ ನಿದ್ದೆಹೋಗು ತ್ತಿದ್ದಾಗ ಸರಿಹೊತ್ತಿನಲ್ಲಿ ಇಲ್ಲಿಗೆ ಬಂದು ಯಜಮಾನಿಯೊಡನೆ ಎಲ್ಲವನ್ನೂ ತಿಳಿಸಿ, ಈ ದಿನ ನಾವೆಲ್ಲರೂ ಹೇಗೆ ಹೇಗೆ ನಡೆದು ಕೊಳ್ಳಬೇಕೆಂಬುದನ್ನೂ ಆಗಲೇ ಗೊತ್ತು ಮಾಡಿ ಹೊರಟು ಹೋದಳು. ಈ ದಿನ ಬೆಳಗಿನಿಂದ ನಡೆದುದೆಲ್ಲ ನಿನಗೆ ತಿಳಿದೇ ಇದೆ. ಈ ಮನೆಯಲ್ಲಿ ಗಂಡುಸರು ಯಾರೂ ವಾಸವಾಗಿಲ್ಲ; ರಾತ್ರಿ ಬಂದು ಬೆಳಗ್ಗೆ ಹೊರಟುಹೋಗುತ್ತಾರೆ, ಅಷ್ಟೇ. ಬೆಳಗ್ಗೆ ಬಾಗಿಲು ತೆರೆಯಲು ಅಷ್ಟು ಸಾವಕಾಶವಾದುದನ್ನು ಕಂಡೂ ನಮ್ಮ ವೃತ್ತಿಯು ನಿನಗೆ ತಿಳಿ

ಯಲಿಲ್ಲವೆ? ಆ ನೀಚಳು ಕಿಟಕಿಯಲ್ಲಿ ಆಗ ನಮಗೆ ಸಂಜ್ಞೆಮಾಡಿದ್ದೇನು ನಿನಗೆ ಗೊತ್ತಿದೆಯೇ? ನಮ್ಮ ಯಜಮಾನಿಯು ಸರದಾರನಂತೆ ವೇಷ ಹಾಕಿಕೊಳ್ಳಬೇಕೆಂದೂ ನಾವೆಲ್ಲರೂ ನಿನಗೆ ಯಾವ ವಿಧದಲ್ಲಿಯೂ ಸಂಶಯವುಂಟಾಗದಂತೆ ನಡೆದುಕೊಳ್ಳಬೇಕೆಂದೂ ಸಂಜ್ಞೆ; ತಿಳಿಯಿತೋ?'' ಎಂದಳು.

ಪ್ರಮದೆ.—(ದೀರ್ಘ ನಿಶ್ವಾಸವನ್ನು ಬಿಟ್ಟು) ಅಯ್ಯೋ, ಪೈಶಾಚಿಕ ಕೃತ್ಯ! ಇದರ ಸುತ್ತುಮುತ್ತಲೂ ಇರುವ ಮನೆಗಳು ಯಾರವು?

ಚಂದಿರೆ.—ಎಲ್ಲವೂ ನಮ್ಮ ಜಾತಿಯವರವೇ?

ಪ್ರಮದೆ.—ಚೆನ್ನಾಯಿತು; ನಾನಂತೂ ವಿಷದ ಮಡುವಿನಲ್ಲಿ ಮುಳುಗಿದಂತಾಯಿತು. ಮಿಂಚಿ ಹೋದುದಕ್ಕೆ ಚಿಂತಿಸಿ ಫಲವೇನು? ಇನ್ನು ಈ ನರಕ ಯಾತನೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನವೇನೋ ಅದನ್ನು ಯೋಚಿಸಬೇಕು.

ಹೀಗೆಂದು ಹೇಳಿ ಪ್ರಮದೆಯು ದೀರ್ಘಾಲೋಚನೆಯಿಂದ ಸುಮ್ಮನೆ ಕುಳಿತಳು.

ಚಂದಿರೆ.—ಏನಮ್ಮಾ, ಏಕೆ ಸುಮ್ಮನೆ ಕುಳಿತಿರಿ? ಏನು ಯೋಚನೆ ಮಾಡುತ್ತೀರಿ?

ಪ್ರಮದೆ.—ಏನೂ······ಇಲ್ಲ. ಮುಂದಿನ ಸಂಗತಿಯನ್ನು ಹೇಳು.

ಚಂದಿರೆ.—ಮುಂದೇನು? ಎಲ್ಲ ತಿಳಿದ ವಿಷಯವೇ.

ಪ್ರಮದೆ.—ಹಾಗಲ್ಲ; ನನ್ನನ್ನು ಇಲ್ಲಿಗೆ ಯಾವ ಉದ್ದೇಶದಿಂದ ಕರೆತಂದಿರುವರು?

ಚಂದಿರೆ.—ಅಯ್ಯೋ, ಮರುಳೇ! ನಾನಿನ್ನೇನು ಹೇಳಲಿ? ನನಗೆ ನಾಚಿಕೆಯಾಗುವುದು; ಈ ದಿನ ರಾತ್ರಿ ಈ ಪಟ್ಟಣದ ಕೊತ್ತವಾಲ ಸಾಹೇಬರು ನಿನಗಾಗಿ ಇಲ್ಲಿಗೆ ದಯಮಾಡಿಸುವರು. ಮುಂದೆ ನಡೆಯುವುದನ್ನು ನೀನೇ ಊಹಿಸಿಕೊ.

ಪ್ರಮುದೆ.—ಆಗಲಿ, (ಇದೇನು ಅಂತಹ ಮಹತ್ವವಾದುದಲ್ಲ ಎಂದು ತನ್ನಲ್ಲಿಯೇ ಹೇಳಿಕೊಂಡು) ನೀನು ಈ ಮನೆಯ ಯಜಮಾನಿಯ ಮಗಳಲ್ಲವೆಂದು ತೋರುವುದು. ಇಂತಹ ಕುಂಭೀಪಾಕ ನರಕದಲ್ಲಿರಲು ನಿನ್ನ ಮನಸ್ಸು ಹೇಗೆ ಒಪ್ಪುವುದು! ಈ ಸ್ಥಿತಿಯಲ್ಲಿರುವುದೇ ನಿನಗೆ ಸಂತೋಷಕರವಾಗಿದೆಯೋ?

ಚಂದಿರೆ.—ಅಕ್ಕಾ, ಏನು ಹೇಳಲಿ? ಚಿಕ್ಕಂದಿನಿಂದಲೂ ನಾನು ಈ ಮನೆಯಲ್ಲಿಯೇ ಬೆಳೆದವಳು. ಆದುದರಿಂದ ನನ್ನ ನಡತೆಯು ಮತ್ತೆ ಹೇಗಿದ್ದೀತು?

ಪ್ರಮುದೆ.—ನಿನ್ನ ಮನಸ್ಸು ಇಲ್ಲಿಯೇ ಇರಲು ಸಮ್ಮತಿ ಪಡುವುದೋ?

ಚಂದಿರೆ.—ಒಂದೊಂದು ವೇಳೆ ಇಲ್ಲಿಂದ ಓಡಿಹೋಗಬೇಕೆಂದೆನಿಸುವುದು.

ಪ್ರಮುದೆ.—ಹಾಗಾದರೆ ಎಲ್ಲಿಯಾದರೂ ಓಡಿಹೋಗಬಹುದಾಗಿದ್ದಿತಲ್ಲಾ!

ಚಂದಿರೆ.—ನಿಜ; ಓಡಿಹೋಗುವುದಾದರೂ ಎಲ್ಲಿಗೆ? ಬೇರೆ ಉದ್ಯೋಗವೇನು ಮಾಡಲಿ?

ಪ್ರಮುದೆ.—ಹಾ ವಿಧಿಯೇ! ಸ್ತ್ರೀಯರಿಗೆ ಉದರ ಪೋಷಣಾರ್ಥವಾಗಿ ವೇಶ್ಯಾಧರ್ಮವೊಂದೇ ಉಪಾಯವೆ? ಬ್ರಹ್ಮನು ಇದಕ್ಕಾಗಿಯೇ ಇಂತಹ ಸ್ತ್ರೀಯರನ್ನು ಸೃಷ್ಟಿಸಿರುವನೆ? ಹೇ ದೇವಾ! ಇದೇನು ನಿನ್ನ ಲೀಲಾ ನಾಟಕವೋ! ಸರ್ವ ಪ್ರಾಣಿಗಳಿಗಿಂತಲೂ ಶ್ರೇಷ್ಠವಾದ ಈ ಮಾನವ ಜನ್ಮಕ್ಕೆ ಜ್ಞಾನ ದಾನ ಮಾಡಿರುದರ ಫಲವು ಇದೇ ಏನು? ಈ ಜ್ಞಾನ ಮಯವಾದ ಶರೀರವನ್ನು ಹಲಕೆಲವು ವಿಟ ಪುರುಷರಿಗೆ ವಿಕ್ರಯ ಮಾಡುವುದೆ! ಅಯ್ಯೋ! ಉಚ್ಚ ನೀಚರೆಂಬ ಭೇದ ಭಾವವಿಲ್ಲದೆ ಯಾವ ಕುಲದವನೇ ಆಗಿರಲಿ, ಎಂತಹ ನೀಚನೇ ಆಗಿರಲಿ, ರೋಗಿಷ್ಠನೇ ಆಗಿರಲಿ, ಚಾಂಡಾಲನೇ ಆಗಿರಲಿ, ಅಂತಹ ಮನುಷ್ಯಾಧಮನಿಗೆ ಅತ್ಯುತ್ತಮವಾದ ದೇಹವನ್ನೊಪ್ಪಿಸಿ, ಅವನ ಅಡಿಯಾಳಾಗಿ, ಮುಂದೆ ಉಂಟಾಗ

ಬಹುದಾದ ವಿಪತ್ಪರಂಪರೆಗಳನ್ನೂ ಲೆಕ್ಕಿಸದೆ, ಈ ಹಾಳು ಹೊಟ್ಟೆಯನ್ನು ತುಂಬಿಕೊಳ್ಳುವುದೆ? ಶಿವ ಶಿವಾ! ಈ ವೇಶ್ಯಾಧರ್ಮಕ್ಕೆ ಧಿಕ್ಕಾರ! ಧಿಕ್ಕಾರ!! ಹೇ ಭಗವನ್! ಇನ್ನು ಮುಂದೆಯಾದರೂ ನೀನು ಈ ವೇಶ್ಯಾ ಧರ್ಮದ ನಾರಿಯರನ್ನು ಸೃಷ್ಟಿಸಬೇಡ; ಈಗ ಜೀವಿತರಾಗಿರತಕ್ಕವರಿಗೂ ಒಳ್ಳೆಯ ಬುದ್ಧಿಯನ್ನು ಕೊಡು. ಆದುದು ಆಗಿ ಹೋಯಿತು; ಮುಂದೆಯಾದರೂ ಈ ವೇಶ್ಯಾಧರ್ಮದ ನಾರಿಯರು ಈ ಪ್ರಪಂಚದಲ್ಲಿಯೇ ಇಲ್ಲದಂತಾಗಲಿ.

## ಹನ್ನೊಂದನೆಯ ಪರಿಚ್ಛೇದ

ಚಂದಿರೆಯು ಪ್ರಮದೆಯ ಈ ಭಾಷಣವನ್ನು ಕೇಳಿ ಸ್ವಲ್ಪ ವ್ಯಸನ ಪಟ್ಟಳು; ಉತ್ತರ ಕ್ಷಣದಲ್ಲಿಯೇ ಸ್ವಲ್ಪ ನಕ್ಕೂ ಬಿಟ್ಟಳು; ಅದೇಕೊ ನಮಗೆ ತಿಳಿಯದು. ಅವಳು ಪ್ರಮದೆಯನ್ನು ಕುರಿತು, "ನೀನು ಹೇಳುವುದೆಲ್ಲ ನಿಜ; ನಾನು ಇಲ್ಲಿಂದ ಹೊರಗೆ ಹೋಗಿ ಮಾಡುವ ಉದ್ಯೋಗವೇನು? ಅಲ್ಲದೆ, ಈ ರೂಪ, ಈ ಯೌವನ—ಇವೆರಡೂ ಎಲ್ಲಿ ಹೋದರೂ ನನಗೆ ಮೃತ್ಯು ಸ್ವರೂಪವಾಗಿರುವುವು. ನಾನು ಒಂಟಿಯಾಗಿ ಕಂಡಕಂಡ ಸ್ಥಳಗಳಲ್ಲಿ ತಿರುಗುವುದಕ್ಕೆ ಮೊದಲಿಟ್ಟರೆ ನೀಚರಾದ ವಿಟ ಪುರುಷರ ಕಣ್ಣಿಗೆ ಬೀಳಲೇ ಬೇಕಾಗುವುದು; ಇಲಿಯ ಬಾಯಿಗೆ ಹೆದರಿ ಹುಲಿಯ ಬಾಯಿಗೆ ಬಿದ್ದಂತಾಗುವುದಿಲ್ಲವೆ? ನಿಸ್ಸಹಾಯಕಳಾಗಿ ಎಲ್ಲೆಂದರಲ್ಲಿ ಅಲೆದಾಡುವುದಕ್ಕಿಂತಲೂ ಈಗ ನನ್ನ ಯಜಮಾನಿಯಾಗಿರುವ ಈ ನೀಚ ವ್ಯಕ್ತಿಯ ಸಹವಾಸವೇ ಉತ್ತಮವಲ್ಲವೆ?

ಪ್ರಮದೆ.—ಒಳ್ಳೆಯದು; ಸ್ತ್ರೀಯರು ಯಾವಾಗಲೂ ಅಸ್ವತಂತ್ರರು. ಅವರು ತಮ್ಮ ರೂಪ, ತಾರುಣ್ಯ, ಮಾನ, ಪ್ರಾಣ—ಇವುಗಳನ್ನು ಕಾಪಾಡಿಕೊಂಡು ಸದ್ವಿನಿಯೋಗ ಮಾಡುವ ಕಾಲದಲ್ಲಿ ಮಾತ್ರ ಸ್ವಾತಂತ್ರ್ಯವನ್ನು ಹೊಂದಬಹುದು; ಆದರೆ ಆಗ ಪಾತ್ರಾಪಾತ್ರ ವಿಚಾರ ಮಾಡಬೇಕಾಗಿರುವುದು. ನಾನು ನನ್ನ ಮಾನ ಪ್ರಾಣಗಳನ್ನು ಕಾಪಾಡಿಕೊಳ್ಳುವುದಕ್ಕಾಗಿಯೇ ಪುರುಷ ವೇಷವನ್ನು ಧರಿಸಿದುದು. ನೀನು ಸುಂದರಿಯೂ ಚತುರಳೂ ಆಗಿರುವೆಯಲ್ಲವೆ? ನಿನ್ನ ಜನ್ಮವು ಇಂತಹ ನೀಚ ಕುಲದಲ್ಲಿ ಆಗಿರಲಾರದು; ನೀನು ಉಚ್ಚ ಕುಲದಲ್ಲಿಯೇ ಹುಟ್ಟಿರಬೇಕು. ನೀನು ಇಂತಹ ನೀಚಳ ಆಶ್ರಯದಿಂದಲೇ ಎಂದೆಂದಿಗೂ ಜೀವಿಸಲಾರೆಯೆಂದು ತಿಳಿದೇ ನಾನು ಈ ರೀತಿಯಾಗಿ ನಿನಗೆ ಹೇಳುತ್ತಿರುವುದು.

ಚಂದಿರೆ.—ನಿಜ; ನನ್ನ ಮನಸ್ಸು ಬೇರೆ ವಿಧವಾಗಿ ಆಲೋಚಿಸುತ್ತಿರುವುದು. ನಿನ್ನ ಅಭಿಪ್ರಾಯದಂತೆ ನಾನು ಸಂಸಾರವನ್ನೆಂದಿಗೂ

ಸ್ವೀಕರಿಸುವಂತಿಲ್ಲ ; ಏಕೆಂದರೆ, ನಾನು ನನ್ನ ಸತೀತ್ವವನ್ನು ಹಾಳು ಮಾಡಿಕೊಂಡಿರುವೆನು.

ಪ್ರಮುದೆ.—ನಾನು ಹೇಳುವುದನ್ನು ಕೇಳು : ಇದುವರೆಗೆ ಆದುದು ಆಗಿಹೋಯಿತು. ಇನ್ನು ಮುಂದಾದರೂ ನಿನ್ನನ್ನು ಹೆಂಡಿತಿಯನ್ನಾಗಿ ಸ್ವೀಕರಿಸುವುದಕ್ಕೊಪ್ಪುವ ಸಭ್ಯನೊಬ್ಬನನ್ನು ಪತಿಯಾಗಿ ವರಿಸಿ ಸಂಸಾರ ಮಾಡಿಕೊಂಡಿರಬಹುದು. ನೀನು ಯಾವಾಗ ಒಬ್ಬ ಮನುಷ್ಯನ ಗೃಹಿಣಿ ಯಾಗುವೆಯೋ ಆಗ ನಿನ್ನ ದುರ್ಗುಣಗಳೆಲ್ಲ ಮಾಯವಾಗುವುವು. ನೀನಿನ್ನೂ ಚಿಕ್ಕವಳು ; ನಿನ್ನ ಮನಸ್ಸಿನ ಉದಾರಭಾವವೂ, ಯುಕ್ತಾ ಯುಕ್ತ ವಿವೇಚನಾ ಶಕ್ತಿಯೂ ಇನ್ನೂ ಸಂಪೂರ್ಣವಾಗಿ ಅಳಿದು ಹೋಗಿಲ್ಲ.

ಚಂದಿರೆ.—ಇದನ್ನೆಲ್ಲ ಹೇಗೆ ತಿಳಿದು ಹೇಳುತ್ತಿರುವೆ?

ಪ್ರಮುದೆ.—ನನ್ನೊಡನೆ ಸಖ್ಯಭಾವದಿಂದಿರಲು ನಿನ್ನ ಮನಸ್ಸು ಒಪ್ಪುತ್ತದೆಯೋ ?

ಚಂದಿರೆ.—ಓಹೋ ! ನಿನ್ನಂತಹ ಸದ್ಗೃಹಿಣಿಯೊಡನೆ ಸ್ನೇಹವನ್ನು ಬೆಳೆಯಿಸಲು ಯಾರಿಗೆ ತಾನೆ ಮನವೊಪ್ಪದು ?

ಪ್ರಮುದೆ.—ನೋಡು ! ಜಾತಿಯಲ್ಲಿ ವೇಶ್ಯೆಯರಾಗಿರತಕ್ಕವರು, ಚಿಕ್ಕವರಾಗಲಿ ದೊಡ್ಡವರಾಗಲಿ, ತಮ್ಮ ಪ್ರಾಣವೇ ಹೋಗಲಿ ನಿಜಾಂಶ ವನ್ನೆಂದಿಗೂ ಹೇಳುವುದಿಲ್ಲ. ಅವರ ಬುದ್ಧಿಯು ನಿನ್ನ ಬುದ್ಧಿಯಂ ತಿರುವುದಿಲ್ಲ; ಯೋಗ್ಯವಾದ ನಡತೆಗಳಲ್ಲಿ ಅವರಿಗೆ ಎಳ್ಳಷ್ಟು ಮನಸ್ಸಿರು ವುದಿಲ್ಲ ; ವಂಚನೆ, ಕೌಟಿಲ್ಯ—ಇವುಗಳೇ ಅವರ ಕುಲದೇವರು. ನೀನು ನೀಚ ವೃತ್ತಿಯನ್ನವಲಂಬಿಸಿದ್ದರೂ ವಂಚನೆಯಿಲ್ಲದೆ ನಿಜವನ್ನೇ ಹೇಳು ತ್ತಿರುವೆ ; ಅಲ್ಲದೆ, ನಾನು ಹೇಳುತ್ತಿರುವ ನೀತಿಯನ್ನು ವಿನಯದಿಂದ ಕೇಳುತ್ತಿರುವೆ. ಇದು ವೇಶ್ಯಾಧರ್ಮಕ್ಕೆ ಕೇವಲ ವಿರುದ್ಧವಾದುದು ; ನೀನು ಹುಟ್ಟು ಸೂಳೆಯಲ್ಲವೆಂದು ಇದರಿಂದಲೇ ಕಂಡುಹಿಡಿದೆನು.

ಚಂದಿರೆ.—ಆದರೆ ಈಗ ಏನುಮಾಡಬೇಕೆಂದು ಹೇಳುತ್ತೀಯೆ ?

ಪ್ರಮುದೆ.—ಏನಾದರೂ ಒಂದು ಉಪಾಯದಿಂದ ನಾವಿಬ್ಬರೂ ಇಲ್ಲಿಂದ ಓಡಿಹೋಗಬೇಕು.

ಚಂದಿರೆ.—ಅಸಾಧ್ಯ! ಕೇವಲ ಅಸಾಧ್ಯ! ಎಂದಿಗೂ ಆಗುವುದಿಲ್ಲ.

ಪ್ರಮುದೆ.—ಅದೇಕೆ? ನಿನಗಿನ್ನೂ ಇಲ್ಲಿಯೇ ಇರಬೇಕೆಂಬ ಅಪೇಕ್ಷೆಯುಂಟೊ?

ಚಂದಿರೆ.—ಇಲ್ಲ, ಇಲ್ಲ; ನಾವು ಇಲ್ಲಿರುವುದು ಒಂದು ಬಂದೀಖಾನೆಯಲ್ಲಿದ್ದ ಹಾಗೆ; ಬಹಳ ಭದ್ರವಾದ ಕಾವಲಿದೆ.

ಪ್ರಮುದೆ.—ಏನಾದರೂ ಆಗಲಿ, ನಾವು ಇಲ್ಲಿಂದ ಓಡಿಹೋಗಲೇಬೇಕು. ನೀನು ಅದಕ್ಕೆ ಸಹಾಯ ಮಾಡಲಾರೆಯಾ?

ಚಂದಿರೆ.—ಅಗತ್ಯವಾಗಿ ನನ್ನ ಕೈಯಲ್ಲಾದಷ್ಟು ಸಾಹಸ ಮಾಡುವೆನು. ನಿನ್ನಂತಹ ಗುಣಶಾಲಿನಿಯಾದ ತರುಣಿಗೆ ಸಹಾಯ ಮಾಡದೆ ಇನ್ನಾರಿಗೆ ಸಹಾಯ ಮಾಡಬೇಕು? ಇಲ್ಲಿ ಇನ್ನೂ ಕೆಲವರಿದ್ದಾರಷ್ಟೆ! ಅವರಿಗೆ ಈ ರೀತಿಯಾಗಿ ಸಹಾಯ ಮಾಡೆನು.

ಪ್ರಮುದೆ.—ಹಾಗಾದರೆ ಉಪಾಯವೇನು?

ಚಂದಿರೆ.—(ಸ್ವಲ್ಪ ಹೊತ್ತು ಆಲೋಚಿಸಿ) ಒಂದೇ ಒಂದು ಉಪಾಯ; ಬೇರೆ ಯಾವುದೂ ಇಲ್ಲ.

ಪ್ರಮುದೆ.—ಅದೇನು? ಬೇಗ ಹೇಳಿಬಿಡು.

ಚಂದಿರೆ.—ಈ ದಿನ ಇಲ್ಲಿಗೆ ಕೊತ್ತವಾಲ ಸಾಹೇಬನು ಬರುತ್ತಾನಷ್ಟೆ! ನೀನು ಈ ದಿನ ಮಧ್ಯಾಹ್ನವೆಲ್ಲ, ಇಲ್ಲಿರುವವರಿಗೆ ಯಾವ ಸಂಶಯವೂ ಉಂಟಾಗದಂತೆ, ಅವರು ಏನೇನು ಹೇಳುವರೋ ಅದಕ್ಕೆಲ್ಲ ಸಮ್ಮತಿಯನ್ನು ಕೊಡುತ್ತ ಇರು. ಕೊತ್ತವಾಲನು ಬರುವುದು ನಿನಗಾಗಿಯೇ. ಅವನು ಬಂದ ಕೂಡಲೆ ಹುಸಿ ನಗೆಯಿಂದಲೂ, ಮೆತುವಾದ ಮಾತಿನಿಂದಲೂ ಅವನನ್ನು ಸಂತೋಷಪಡಿಸಿ ಅವನಿಗೆ ಮದ್ಯವನ್ನು ಹೆಚ್ಚಾಗಿ ಕುಡಿಸಿಬಿಡು. ನಾನು ಆ ಮದ್ಯಕ್ಕೆ ಸೇರಿಸಬೇಕಾದ ಸಾಮುಗ್ರಿಗಳನ್ನೆಲ್ಲ ಸೇರಿಸಿ ಕೊಡುತ್ತೇನೆ. ಅದನ್ನು ಕುಡಿದ ಕೂಡಲೆ ಅವನಿಗೆ ದಿಗ್ಭ್ರಮೆಯುಂಟಾಗುವುದು. ಆ ಸಮಯದಲ್ಲಿ, ಇಲ್ಲಿಂದ ನಿನ್ನನ್ನು ಪಾರುಗಾಣಿಸಬೇಕೆಂದು ಮೊದಲು ವಿನಯದಿಂದ ಪ್ರಾರ್ಥಿಸಿಕೊ; ಅವನು ಅದಕ್ಕೆ ಒಪ್ಪದೆ ನಿನ್ನನ್ನು ಮುಟ್ಟಲು ಬಂದರೆ, ತಪ್ಪಿಸಿಕೊಂಡು

ಅವನಿಗೆ ಬಲವಾಗಿ ಒಂದು ಒದೆಯನ್ನು ಕೊಡು; ನಾನೂ ಅಲ್ಲಿಯೇ, ಎಲ್ಲಿಯಾದರೂ ಒಂದು ಕಡೆ, ಅಡಗಿಕೊಂಡಿರುವೆನು. ಒದೆತ ಬಿದ್ದ ಕೂಡಲೆ ಅವನು ನೆಲಕ್ಕೆ ಉರುಳಿಕೊಳ್ಳುವನು. ತರುವಾಯ ನಾವಿಬ್ಬರೂ ಸೇರಿ ಅವನ ಉಡುಪನ್ನು ಕಿತ್ತುಕೊಳ್ಳೋಣ. ಆ ಉಡುಪನ್ನು ನೀನು ತೊಟ್ಟುಕೊ; ನಿನ್ನ ಪುರುಷ ವೇಷದ ಉಡುಪನ್ನು ನಾನು ತೊಟ್ಟು ಕೊಳ್ಳುವೆನು. ಆಮೇಲೆ ನಾವಿಬ್ಬರೂ ಇಲ್ಲಿಂದ ಹೊರಟುಹೋಗ ಬಹುದು. ಇದರ ವಿನಾ ಬೇರೆ ಉಪಾಯವಿಲ್ಲ.

ಪ್ರಮದೆ.—(ಸಂತೋಷದಿಂದ) ಸರಿ, ಸರಿ, ಒಳ್ಳೆಯ ಉಪಾಯ. ಅವನು ಮದ್ಯಪಾನದಿಂದ ಮತ್ತನಾದ ಕೂಡಲೆ ಅವನ ಬಾಯಿಗೆ ಬಟ್ಟೆಯನ್ನು ತುರುಕಬೇಕು; ಇಲ್ಲದಿದ್ದರೆ ಅವನು ಕೂಗಿಕೊಳ್ಳ ಬಹುದು.

ಚಂದಿರೆ.—ಆವಶ್ಯಕವಿಲ್ಲ; ನೀನೇನೂ ಭಯಪಡಬೇಡ. ಅವನು ಬೇಕಾದಷ್ಟು ಕೂಗಿಕೊಳ್ಳಲಿ; ಇಲ್ಲಿಗೆ ಇನ್ನು ಯಾರೂ ಬರುವಂತಿಲ್ಲ, ನಾವಿಬ್ಬರೂ ಅವನೊಬ್ಬನೂ, ಅಷ್ಟೇ.

ಪ್ರಮದೆ.—ಒಳ್ಳೆಯ ಉಪಾಯವನ್ನು ಹೇಳಿದೆ. ನಿನ್ನ ಈ ಉಪ ಕಾರಕ್ಕಾಗಿ ನಾನು ನಿನಗೆಂದಿಗೂ ಕೃತಜ್ಞಳಾಗಿರುವೆನು.

ಚಂದಿರೆ.—ಮುಂದಿನ ಮಾತು ಮುಂದೆ. ನೀನು ಮಾತ್ರ ಬಹಳ ಎಚ್ಚರಿಕೆಯಿಂದಿರಬೇಕು. ಈ ದಿನ ಸಾಯಂಕಾಲಕ್ಕೆ ನಿನ್ನನ್ನು ಅರಮನೆಗೆ ಕರೆದುಕೊಂಡು ಹೋಗುವ ನೆವದಿಂದ ಅಲಂಕರಿಸುವರು. ಅವರು ಏನು ಮಾಡಿದರೂ ನೀನು ಯಾವ ವಿಧವಾದ ಸಂಶಯಕ್ಕೂ ಆಸ್ಪದ ಕೊಡದೆ, ಅವರ ಮಾತಿನಂತೆಯೇ ನಡೆದುಕೊಳ್ಳುತ್ತಿರು. ಆದರೆ ರಾತ್ರಿ ಕೊತ್ತವಾಲ ಸಾಹೇಬನನ್ನು ಮೋಸಗೊಳಿಸುವ ಕಾರ್ಯದಲ್ಲಿ ಮಾತ್ರ ಬಹಳ ಜಾಗರೂಕತೆಯಿಂದಿರು.

ಪ್ರಮದೆ.—ಚಂದ್ರಾ! ನೀನು ನನ್ನ ಭಾಗದ ದೇವರು. ಭಗವಂತನು ನಿನಗೆ ಕಲ್ಯಾಣವನ್ನುಂಟುಮಾಡಲಿ.

ಹೀಗೆಂದು ಹೇಳಿ ತನ್ನ ಪ್ರೇಮಾತಿಶಯವನ್ನು ವ್ಯಕ್ತಪಡಿಸಿ

ಪ್ರಮದೆಯು ಚಂದಿರೆಯೊಡನೆ ಅಲ್ಲಿಂದೆದ್ದು ಸ್ಥಳಾಂತರಕ್ಕೆ ಹೊರಟು ಹೋದಳು. ಅಷ್ಟರಲ್ಲಿಯೇ ಸಾಯಂಕಾಲವು ಸಮಿಾಪಿಸುತ್ತ ಬಂದಿತು. ಚಂದಿರೆಯು ಹೇಳಿದ ಮೇರೆಗೆ ಇಬ್ಬರು ದಾಸಿಯರು ಪ್ರಮದೆಯ ಬಳಿಗೆ ಬಂದು, ''ತಾಯಿಾ! ಅರಮನೆಗೆ ಹೋಗುವುದಿಲ್ಲವೇನು? ಯಜಮಾನಿಯವರು ನಿಮಗೆ ಅಲಂಕಾರ ಮಾಡಬೇಕೆಂದು ಹೇಳಿರುತ್ತಾರೆ, ಬನ್ನಿರಿ'' ಎಂದು ಪ್ರಮದೆಯನ್ನು ಬೇರೊಂದು ಕೊಟ್ಟಡಿಗೆ ಕರೆದುಕೊಂಡು ಹೋದರು. ಅಲ್ಲಿ ಆಕೆಯನ್ನು ಬಹು ಮೂಲ್ಯವಾದ ವಸ್ತ್ರಾಭರಣಗಳಿಂದಲಂಕರಿಸಿ, ಘಮ ಘಮಿಸುವ ತೈಲಗಳನ್ನು ತಲೆಗೆ ಹಚ್ಚಿ ಜಡೆಹಾಕಿದರು. ಇದರಿಂದ, ಪ್ರಮದೆಯು ಲೋಕೋತ್ತರ ಸುಂದರಿಯಾಗಿ ಕಂಡುಬಂದಳು. ತರುವಾಯ, ಆ ದಾಸಿಯರು ಅವಳನ್ನು ಕರೆದುಕೊಂಡು ಹೋಗಿ, ಮನೋಹರವಾಗುವಂತೆ ಸಿಂಗರಿಸಿರುವ ಒಂದು ಕೊಟ್ಟಡಿಯಲ್ಲಿ ಕುಳ್ಳಿರಿಸಿ, ಎಲ್ಲಿಗೋ ಹೊರಟುಹೋದರು. ಪ್ರಮದೆಯು ತನ್ನ ಮುಂದಿನ ಪರಿಣಾಮವನ್ನು ಕುರಿತು ಆಲೋಚಿಸುತ್ತ, ''ದೇವರೇ! ನನ್ನನ್ನು ಈ ನರಕದಿಂದ ಉದ್ಧಾರಮಾಡು; ನನ್ನ ಸತೀತ್ವವನ್ನು ಕಾಪಾಡು. ಹೇ ದಯಾ ಸಮುದ್ರ! ದ್ರೌಪದಿಯ ಮಾನವನ್ನು ರಕ್ಷಿಸಿದಂತೆ ನನ್ನ ಮಾನವನ್ನೂ ರಕ್ಷಿಸು'' ಎಂದು ಅಂತರಂಗದಲ್ಲಿಯೇ ಭಗವಂತನನ್ನು ಪ್ರಾರ್ಥಿಸಿದಳು.

ಸೂರ್ಯನು ಅಸ್ತಂಗತನಾದನು; ಎಲ್ಲೆಲ್ಲಿಯೂ ದೀಪ ಮಾಲೆಗಳು ಹೊಳೆಯಲಾರಂಭಿಸಿದುವು. ತನ್ನನ್ನು ಅರಮನೆಗೆ ಕರೆದುಕೊಂಡು ಹೋಗಬಹುದೆಂಬ ಆಶೆಯು ಪ್ರಮದೆಗೆ ಎಳ್ಳಷ್ಟಾದರೂ ಇದ್ದಿದ್ದರೆ, ಈಗ ಅದೂ ಮಾಯವಾಗಿ ಹೋಯಿತು. ಚಂದಿರೆಯು ಹೇಳಿದ ಮಾತೇ ಸತ್ಯವಾಯಿತು. ಸಂಜೆಯಾಗಿ ಆಗಲೇ ಒಂದು ಜಾವದ ಹೊತ್ತು ಮಿಾರಿತು. ಆ ವೇಶ್ಯಾಗೃಹದಲ್ಲಿ, ಉಳಿದವರೆಲ್ಲರ ಊಟ ಉಪಚಾರಗಳೆಲ್ಲವೂ ಮುಗಿದುವು. ಆ ಸಮಯದಲ್ಲಿ ಚಂದಿರೆಯು ಕೆಲವು ಹಣ್ಣುಗಳನ್ನೂ ಸ್ವಲ್ಪ ಹಾಲನ್ನೂ ಪ್ರಮದೆಗಾಗಿ ತಂದಳು. ಪ್ರಮದೆಯು ಇದುವರೆಗೂ ಒಬ್ಬಳೇ ಕುಳಿತಿದ್ದು ಬೇಸತ್ತು, ಆಗಾಗ ದುಃಖದಿಂದ ಕಣ್ಣೀರು ಸುರಿಸುತ್ತ, ನಿಟ್ಟುಸಿರು ಬಿಡುತ್ತಿದ್ದಳು. ಚಂದಿರೆಯು,

"ಅಕ್ಕಾ! ಇದನ್ನು ತೆಗೆದುಕೊ, ಬಹಳ ಹಸಿವಾಗಿರಬಹುದು" ಎಂದು ಹೇಳಿ, ಹಾಲನ್ನೂ ಹಣ್ಣನ್ನೂ ಕೊಟ್ಟಳು. ಅಂತಹ ವಿಪತ್ಕಾಲದಲ್ಲಿಯೂ ಪ್ರಮದೆಯು ಅವುಗಳನ್ನು ಸ್ವೀಕರಿಸದಿರಲು ಆಗಲಿಲ್ಲ. ಹೊಟ್ಟೆಯು ಬಹಳ ಕೆಟ್ಟದು; ಎಂತಹ ದುರ್ದಸೆಯಲ್ಲಿಯೂ ಹಸಿವನ್ನು ತಡೆಯುವುದು ಸಾಧ್ಯವಲ್ಲ. ಪ್ರಮದೆಯು ಫಲಾಹಾರವು ಮುಗಿದೊಡನೆಯೇ ಚಂದಿರೆಯು, "ಅಕ್ಕಾ! ಕೊತ್ತವಾಲನು ಹೊರಗಡೆ ಬಂದು ಕುಳಿತಿರುವನು; ಇಷ್ಟರಲ್ಲಿಯೇ ಇಲ್ಲಿಗೆ ಬರಬಹುದು; ಗಾಬರಿಪಡಬೇಡ" ಎಂದು ಹೇಳುತ್ತಿರುವಷ್ಟರಲ್ಲಿಯೇ ಹೊರಗಿನಿಂದ ಯಾರೋ ಬರುತ್ತಿರುವಂತೆ ಶಬ್ದವಾಯಿತು. ಕೂಡಲೆ ಚಂದಿರೆಯು ಅಲ್ಲಿಂದೆದ್ದು ಹೋಗಿ ಆ ಶಯ್ಯಾಗಾರದಲ್ಲಿರುವ ಮಂಚದ ಕೆಳಗೆ ಅವಿತುಕೊಂಡಳು.

ಬಾಗಿಲು ತೆರೆಯಿತು. ಸುಮಾರು ನಾಲ್ವತ್ತು ವರ್ಷದ ಮುಸಲ್ಮಾನನೊಬ್ಬನು ಒಳಗೆ ಪ್ರವೇಶಿಸಿದನು. ಪ್ರಮದೆಯು ಎದ್ದು ನಿಂತು ದೂರಕ್ಕೆ ಸರಿದಳು. ಕೊತ್ತವಾಲ ಸಾಹೇಬನು ತನ್ನ ಉದ್ದವಾದ ದಾಡಿಯನ್ನು ನೀವಿಕೊಳ್ಳುತ್ತ, "ಆಹಾ! ಏನು ಸೌಂದರ್ಯ!" ಎಂದನು.

ಪ್ರಮದೆ.—ಸಾಹೇಬಣ್ಣನವರೇ! ದಯಮಾಡಿಸಿರಿ, ಮಂಚದ ಮೇಲೆ ಕುಳಿತುಕೊಳ್ಳಿರಿ. ಅಗೋ! ಅಲ್ಲಿ ತಮಗಾಗಿ ಸಿದ್ಧಪಡಿಸಿದ ಅತ್ಯುತ್ತಮವಾದ ಮದ್ಯವಿದೆ, ಸ್ವೀಕರಿಸಬೇಕು.

ಕೊತ್ತವಾಲನು, "ವಾಹ! ವಾರೆ! ವಾಹ! ಅಚ್ಛಾ!" ಎನ್ನುತ್ತ ಬೆಳ್ಳಿಯ ತಟ್ಟೆಯಲ್ಲಿ ಎರಡು ಮೂರು ಬೆಳ್ಳಿಯ ಬಟ್ಟಲುಗಳಲ್ಲಿ ಹಾಕಿಟ್ಟಿದ್ದ ಮದ್ಯವನ್ನು ಒಂದಾದಮೇಲೊಂದರಂತೆ ಕುಡಿದು ಮುಗಿಸಿಬಿಟ್ಟನು. ಆ ಸುರಾದೇವಿಯ ಮಹಿಮೆಯೆಂತಹುದೋ, ಅದನ್ನು ಸೇವಿಸಿದವನೇ ಬಲ್ಲ; ಸಾಹೇಬನಿಗೆ ಆ ಕ್ಷಣದಲ್ಲಿಯೇ ಸುರಾದೇವಿಯ ಸುಪ್ರಸನ್ನತೆಯುಂಟಾಗಿ ಏನೇನೋ ಮಾತನಾಡಲುಪಕ್ರಮಿಸಿದನು.

ಪ್ರಮದೆಯು ಈ ಅವಕಾಶದಲ್ಲಿ ಸ್ವಲ್ಪ ಮುಂದಕ್ಕೆ ಬಂದು, "ಸ್ವಾಮಿ! ತಾವು ಒಳ್ಳೆಯ ವೇಳೆಗೆ ಇಲ್ಲಿಗೆ ಬರೋಣಾಯಿತು, ತಾವು ನನ್ನ ಅಣ್ಣಂದಿರೆಂದು ತಿಳಿದಿರುವೆನು. ನಾನು ಮೋಸದಿಂದ

ಇಲ್ಲಿಗೆ ಬಂದು ಸಿಕ್ಕುಬಿದ್ದು ಪೇಚಾಡುತ್ತಿರುವೆನು. ತಾವು ದಯವಿಟ್ಟು ನನ್ನನ್ನು ಇಲ್ಲಿಂದ ಬಿಡುಗಡೆ ಮಾಡಬೇಕು. ನನಗೆ ಯಾರೂ ಸಹಾಯಕರಿಲ್ಲ. ನನ್ನ ಮಾನವನ್ನು ಕಾಪಾಡುವ ಭಾರವು ತಮ್ಮ ಕೈಯಲ್ಲಿರುವುದು '' ಎಂದಳು. ಕೊತ್ತವಾಲ ಸಾಹೇಬನು ಮದ್ಯ ಪಾನದ ಮದದಿಂದ, '' ಎಲೌ ಸುಂದರೀ! ನಾನು ಏತಕ್ಕೆ ಬಂದಿರುವೆನೆಂಬುದು ನಿನಗೆ....ತಿಳಿದೇ ಇದೆ. ಎಲ್ಲಿ? ಒಂದು ಮುತ್ತು....ಆ!..ಆ!.. ಅಲ್ಲ!....ಅಲ್ಲ! ಕೊಡು! ನೋ..ಡೋ..ಣ! ಎಂದು ಎದ್ದು ಬಂದನು. ಪ್ರಮದೆಯು ಕೂಡಲೆ ಹಿಂದಕ್ಕೆ ಸರಿದು, '' ಎಲೋ ನೀಚ! ಅಧಮ! ನನ್ನ ಮಾನವನ್ನು ಕಾಪಾಡೆಂದು ನಾನು ದೈನ್ಯ ಭಾವದಿಂದ ಬೇಡಿಕೊಂಡರೆ ಕಾಮಾಂಧನಾದ ನೀನು ದುಷ್ಕಾರ್ಯವನ್ನೇ ಚಿಂತಿಸುತ್ತಿರುವೆಯಾ? ಮದ್ಯದ ಅಮಲು ತಲೆಗೇರಿದಂತೆ ತೋರುವುದು. ದೂರನಿಲ್ಲು! ಇನ್ನು ಒಂದು ಹಜ್ಜೆ ಮುಂದಿಡುವೆಯಾದರೆ ನಿನ್ನ ಮೃತ್ಯುವು ಈಗಲೇ ಸನ್ನಿಹಿತವಾಯಿತೆಂದು ತಿಳಿದುಕೊ '' ಎಂದು ಕೋಪಾಟೋಪದಿಂದ ಆರಕ್ತ ನಯನೆಯಾಗಿ, ಸಿಂಹ ವಾಹಿನಿಯಾದ ಕಾಳಿಯಂತೆ ರೌದ್ರಾವತಾರವನ್ನು ತಾಳಿದಳು. ಆ ಸಂದರ್ಭದಲ್ಲಿ ಅವಳ ವಿಗ್ರಹವನ್ನು ನೋಡಿದವರಿಗೆ ಭಯ ಭಕ್ತಿ ವಿಶ್ವಾಸಗಳು ತಲೆದೋರುವಂತಿದ್ದಿತು. ಕೊತ್ತವಾಲನು ಸ್ವಲ್ಪ ಭಯಪಟ್ಟರೂ, ಕಾಮಾಂಧತೆಯು ಹುಚ್ಚು ಸುರಾ ದೇವಿಯ ಅಮಲೂ ತಲೆಗೇರಿದ್ದುದರಿಂದ ಅವಳ ಮಾತನ್ನು ಲಕ್ಷ್ಯಕ್ಕೆ ತಾರದೆ ಮತ್ತೂ ಸ್ವಲ್ಪ ಮುಂದಕ್ಕೆ ಬಂದು ಎರಡು ಕೈಗಳನ್ನೂ ಚಾಚಿ, '' ಏ! ಪ್ಯಾರೀ! ಪೋರಿ! ಸಿಟ್ಟು ಮಾಡಬೇಡ! ದಯೆ ತೋರಿಸು; ನಾನು ನಿನ್ನ ದಾಸಾನುದಾಸನು '' ಎಂದನು.

ಆ ಹೊತ್ತಿಗೆ ಅಕಸ್ಮಾತ್ತಾಗಿ ಬಾಗಿಲು ಕಡೆಯಿಂದ, '' ಎಲೋ ನೀಚ! ಕುಲಗೇಡಿ! ನಿಲ್ಲು, ನಿಲ್ಲು! ಪರಸ್ತ್ರೀಯನ್ನಪೇಕ್ಷಿಸಿ ಪಾಪ ಕಾರ್ಯಕ್ಕೆ ಬಂದಿರುವೆಯೋ? ನಿಲ್ಲು!'' ಎಂದು ಕರ್ಕಶ ಧ್ವನಿಯಿಂದ ಕೂಗುತ್ತ, ಉದ್ದವಾದ ಗಾಡಿಯಿಂದ ಶೋಭಿಸುತ್ತ, ಕಾವಿ ಬಣ್ಣದ ಅಂಗಿಯನ್ನು ಧರಿಸಿದ ಒಬ್ಬ ಬಾವಾಜಿಯು ಕೈಯಲ್ಲಿ ಯೋಗ ದಂಡವನ್ನು ಹಿಡಿದುಕೊಂಡು ಒಳಗೆ ನುಗ್ಗಿದನು. ಇದನ್ನು ಕಂಡು ಕೊತ್ತ

ವಾಲನು ಥರ ಥರನೆ ಕಂಪಿಸುತ್ತ, ನಿಂತಿದ್ದ ಸ್ಥಳದಲ್ಲಿಯೇ ಬಿದ್ದುಬಿಟ್ಟನು. ಬಾವಾಜಿಯು, "ಮಗಳೇ! ನೀನು ಯಾರವಳು? ನಿನ್ನ ಸಮಾಚಾರ ವೇನು? ಭಯಪಡದೆ ಹೇಳು" ಎನ್ನಲು, ಪ್ರಮದೆಯು ತನ್ನ ವಿಷಯ ವನ್ನೆಲ್ಲ ಸಂಕ್ಷೇಪವಾಗಿ ಹೇಳಿ ಮುಗಿಸಿದಳು; ಅಷ್ಟೇ ಅಲ್ಲದೆ, ತನಗೆ ಸಹಾಯಕಳಾದ ಚಂದಿರೆಯ ಸಮಾಚಾರವನ್ನೂ ಸ್ವಲ್ಪ ಹೇಳಿದಳು. ಬಾವಾಜಿಯು, "ಮಗಳೇ! ಚಿಂತಿಸಬೇಡ; ನೀನು ಇಲ್ಲಿಂದ ಬಿಡುಗಡೆ ಯಾಗುವೆ. ಚಂದಿರೆಯು ಎಲ್ಲಿರುವಳು?" ಎಂದು ಕೇಳಿದನು. ಅದು ವರೆಗೂ ಅಲ್ಲಿ ನಡೆದುದನ್ನೆಲ್ಲ ನೋಡುತ್ತ ಮಂಚದ ಕೆಳಗೆ ಅವಿತು ಕೊಂಡಿದ್ದ ಚಂದಿರೆಯು ಕೂಡಲೆ ಹೊರಗೆ ಬಂದು ಬಾವಾಜಿಗೆ ನಮ ಸ್ಕರಿಸಿ ನಿಂತುಕೊಂಡಳು. ಬಾವಾಜಿಯು, "ಚಂದಿರೆಯೇ! ನೀನು ಇಲ್ಲಿಯೇ ಇರುವೆಯೊ? ಪ್ರಮದಾ ಕುಮಾರಿಯೊಡನೆ ಹೊರಡುವೆಯೊ? ನಿಶ್ಚಯವಾಗಿ ಹೇಳು" ಎನ್ನಲು, ಚಂದಿರೆಯು, "ನಾನು ಪ್ರಮದೆ ಯೊಡನೆ ಹೊರಡುವೆನು, ಇಲ್ಲಿರುವುದಿಲ್ಲ" ಎಂದಳು. ಬಾವಾಜಿಯು, "ಒಳ್ಳೆಯದು; ನೀವು ಬೆಳಗಾಗುವ ವರೆಗೂ ಇಲ್ಲಿಯೇ ಇರಬೇಕು; ನಿಮಗೆ ಇನ್ನು ಯಾವ ತೊಂದರೆಯೂ ಸಂಭವಿಸುವುದಿಲ್ಲ. ನಾನು ಪುನಃ ಬಂದು ನಿಮ್ಮನ್ನು ಕರೆದುಕೊಂಡು ಹೋಗುವೆನು" ಎಂದು ಹೇಳಿ ಕೊತ್ತವಾಲನ ಕಡೆಗೆ ತಿರುಗಿ, "ಎಲೋ, ಕುಲಾಂಗಾರ! ತೊಲಗಿ ಹೋಗು" ಎಂದು ಹೇಳಿ ಒಂದು ಒದೆಯನ್ನು ಕೊಟ್ಟು, "ಇನ್ನು ಮುಂದೆ ಇಂತಹ ನೀಚ ಕಾರ್ಯದಲ್ಲಿ ಪ್ರವರ್ತಿಸಿದರೆ ಯಮ ಲೋಕಕ್ಕೆ ಹೊರಡುವೆ, ತಿಳಿಯಿತೇ? ನಾನು ಯಾರೆಂಬುದು ನಿನಗಿನ್ನೂ ಗೊತ್ತಿ ಲ್ಲದೆ ಇರಬಹುದು" ಎಂದು ಅವನ ಕಿವಿಯಲ್ಲಿ ಏನೋ ಹೇಳಿದನು. ಕೂಡಲೆ ಕೊತ್ತವಾಲನು ಭಯ ಭಕ್ತಿಗಳಿಂದ ಕೂಡಿದವನಾಗಿ, ನೆಲ ಮುಟ್ಟಿ ಸಲ್ಲಾಂ ಮಾಡಿ, "ಅಪ್ಪಣೆಯಾದಂತೆ ನಡೆದುಕೊಳ್ಳುವೆನು, ಗರೀಬನನ್ನು ಕ್ಷಮಿಸಬೇಕು" ಎಂದು ಅರಳಿಯ ಎಲೆಯಂತೆ ನಡುಗ ಲಾರಂಭಿಸಿದನು. ಬಾವಾಜಿಯು, "ಹೊರಡು, ಹೆಚ್ಚು ಹೊತ್ತು ಇಲ್ಲಿ ನಿಲ್ಲಬೇಡ" ಎಂದು ಹೇಳಿದ ಕೂಡಲೆ ಕೊತ್ತವಾಲನು ಕಾಲಿಗೆ ಬುದ್ಧಿ ಹೇಳಿದನು; ಬಾವಾಜಿಯೂ ಹೊರಟುಹೋದನು. ಪ್ರಮದೆಯು

ಇದೆಲ್ಲವನ್ನೂ ನೋಡಿ ಬೆರಗಾಗಿ, "ಈತನು ಯಾರು?" ಎಂದು ಚಂದಿರೆಯನ್ನು ಕೇಳಲು ಚಂದಿರೆಯು, "ನನಗೂ ತಿಳಿಯದು; ಬಾಬರ ಷಹನು ನಾನಾ ವಿಧವಾಗಿ ವೇಷವನ್ನು ಹಾಕಿಕೊಂಡು ಹೀಗೆ ರಾತ್ರಿಯೆಲ್ಲ ಸುತ್ತುತ್ತಿರುವನೆಂದು ಕೇಳಿದ್ದೇನೆ; ಬಹುಶಃ ಅವನೇ ಇರಬಹುದು" ಎಂದಳು. ಪ್ರಮದೆಯು, "ಹಾಗೋ? ಇದ್ದರೂ ಇರಬಹುದು; ದೇವರಿಗೇ ಗೊತ್ತು. ಭಗವಂತನು ದಯಾಮಯನು; ನನ್ನ ಮಾನ ಪ್ರಾಣಗಳನ್ನು ಕಾಪಾಡುವುದಕ್ಕಾಗಿಯೇ ಈ ರೂಪದಿಂದ ಬಂದನೆಂದು ಭಾವಿಸುವೆನು. ಹೇ! ಭಗವನ್! ನನ್ನ ಭಕ್ತಿಪೂರ್ವಕವಾದ ಪ್ರಣಾಮಗಳನ್ನಂಗೀಕರಿಸು.

ಅಂತೂ ಇಂತೂ ರಾತ್ರಿಯು ಕಳೆಯಿತು; ಮತ್ತೆ ಯಾವ ಹೆಚ್ಚು ಸಂಗತಿಯೂ ನಡೆಯಲಿಲ್ಲ. ಪ್ರಾತಃಕಾಲವು ಸಮೀಪಿಸುತ್ತಿರುವಲ್ಲಿ ಬಾವಾಜಿಯು ಪುನಃ ಅಲ್ಲಿಗೆ ಬಂದು, "ಮಕ್ಕಳಿರಾ! ತೊಂದರೆಯೇನೂ ಇಲ್ಲದೆ ಸುಖವಾಗಿರುವಿರಷ್ಟೆ? ಇನ್ನು ಹೊರಡಿರಿ" ಎಂದು ಹೇಳಿ, ಮುಂದಾಗಿ ತಾನು ಹೊರಟನು. ಚಂದಿರೆಯೂ ಪ್ರಮದೆಯೂ ಮೊದಲೇ ಸಿದ್ಧಮಾಡಿಟ್ಟುಕೊಂಡಿದ್ದ ತಮ್ಮ ತಮ್ಮ ಒಡವೆ ವಸ್ತುಗಳನ್ನು ತೆಗೆದುಕೊಂಡು ಆ ಬೈರಾಗಿಯನ್ನನುಸರಿಸಿ ಹೊರಟರು. ಆ ಮನೆಯಲ್ಲಿ ಇವರನ್ನು ಯಾರೂ ತಡೆಯಲಿಲ್ಲ; ಎಲ್ಲಿ ನೋಡಿದರೂ ನಿಶ್ಶಬ್ದವಾಗಿದ್ದಿತು. ಆಗ ಅರುಣೋದಯ ಸಮಯ. ಬೈರಾಗಿಯು ಅವರಿಬ್ಬರನ್ನೂ ಯಮುನಾ ತೀರಕ್ಕೆ ಕರೆತಂದು, "ಪ್ರಮದಾ ಕುಮಾರೀ! ನೀನು ಯಾರೆಂಬುದನ್ನು ನಾನು ಬಲ್ಲೆನು; ನಿನ್ನ ಪತಿಯು ಬಾದಷಹನನ್ನು ಕೊಲ್ಲಬೇಕೆಂದಾಲೋಚಿಸಿ ಕೃತಕಾರ್ಯನಾಗದೆಹೋದನು. ನೀನು ಆತನೊಡನೆ ನಿಷ್ಠುರೋಕ್ತಿಗಳನ್ನಾಡಿದುದರಿಂದ ಆತನು ಜುಗುಪ್ಸೆಪಟ್ಟು ಎಲ್ಲಿಗೋ ಹೊರಟುಹೋದನು. ನೀನು ಪತಿಯನ್ನು ಹುಡುಕಬೇಕೆಂದು ಹೊರಟು ಇಷ್ಟು ತೊಂದರೆಗಳಿಗೆ ಗುರಿಯಾದೆ. ಇಷ್ಟೆಲ್ಲ ಏತಕ್ಕಾಗಿ? ಆ ಕೋಹಿನೂರು ರತ್ನ ಪ್ರಾಪ್ತಿಗಲ್ಲವೆ? ಇಗೋ ನೋಡು! ಇದೇ ಆ ರತ್ನವು; ತೆಗೆದುಕೊ. ಇದರಿಂದುಂಟಾಗುವ ಅತ್ಯಾನಂದವನ್ನನುಭವಿಸು" ಎಂದು ಹೇಳಿ ರತ್ನವನ್ನು ಮುಂದಿಟ್ಟನು. ಪ್ರಮದೆಯು

ನಾಚಿಕೆಯಿಂದ ತಲೆ ತಗ್ಗಿಸಿ ನಿಂತುಕೊಂಡಳು. ಬೈರಾಗಿಯು ಪುನಃ, "ಪ್ರಮದಾ ಕುಮಾರೀ! ಇಲ್ಲಿ ನೋಡು, (ದಾರಿಯನ್ನು ತೋರಿಸಿ) ಈ ದಾರಿಯನ್ನೇ ಹಿಡಿದು ಹೋದರೆ ನಿಮ್ಮ ಕುಟೀರವು ಸಿಕ್ಕುವುದು; ಅಲ್ಲಿ ನಿನ್ನ ಮಗುವು ಬಹಳ ವ್ಯಸನಪಡುತ್ತಿರಬಹುದು. ನಾನು ಇನ್ನು ಎಂಟು ದಿನಕ್ಕೆ ನಿಮ್ಮ ಮನೆಗೆ ಬರುವೆನು" ಎಂದು ಹೇಳಿ ಚಂದಿರೆಯನ್ನು ಕುರಿತು, "ಮಗಳೇ! ನೀನೂ ಪ್ರಮದಾ ಕುಮಾರಿಯ ಸಂಗಡಲೇ ಹೋಗು. ನಾನು ಅಲ್ಲಿಗೆ ಬಂದ ಮೇಲೆ ಮುಂದಿನ ಎಲ್ಲ ವಿಚಾರಗಳನ್ನೂ ಹೇಳುವೆನು; ಇನ್ನು ಹೊರಡಿರಿ, ದೇವರು ನಿಮಗೆ ಕಲ್ಯಾಣವನ್ನುಂಟುಮಾಡಲಿ" ಎಂದು ಹೇಳುತ್ತ ಬೈರಾಗಿಯು ಬೇರೆ ದಾರಿಯನ್ನು ಹಿಡಿದು ಹೊರಟುಹೋದನು. ಪ್ರಮದೆಯೂ ಚಂದಿರೆಯೂ, ಆ ಕೋಹಿನೂರು ರತ್ನವನ್ನು ತೆಗೆದುಕೊಂಡು, ಬೈರಾಗಿಯು ಹೇಳಿದ ದಾರಿಯನ್ನನುಸರಿಸಿ ಹೊರಟರು.

## ಹನ್ನೆರಡನೆಯ ಪರಿಚ್ಛೇದ

ಪ್ರಮದೆಯು ಚಂದಿರೆಯೊಡನೆ ಬೈರಾಗಿಯು ತೋರಿಸಿದ ಮಾರ್ಗವನ್ನನುಸರಿಸಿ ಬರುತ್ತ ಸ್ವಲ್ಪ ಹೊತ್ತಿನಲ್ಲಿಯೇ ತನ್ನ ಮನೆಯನ್ನು ಸೇರಿದಳು. ಮನೆಯ ಬಾಗಿಲಲ್ಲಿ ಆಕೆಯ ಮಗನಾದ ರಂಗೀಲಾಲನು ತನ್ನ ಜೊತೆಗಾರಳಾದ ಚಂಪಕೆಯೊಡನೆ ವಿನೋದವಾಗಿ ಆಟವಾಡುತ್ತಿದ್ದನು. ಅವನನ್ನು ನೋಡಿದ ಕೂಡಲೆ ಪ್ರಮದೆಯ ಅಂತಃಕರಣವು ಉಕ್ಕೇರಿತು. ಅವಳು ದುಡು ದುಡನೆ ಓಡಿಹೋಗಿ, ರಂಗೀ, ರಂಗೀಲಾಲ ಎಂದು ಕೂಗುತ್ತ, ಮಗುವನ್ನೆತ್ತಿಕೊಂಡು ಎಷ್ಟೋ ಸಾರಿ ಮುದ್ದಿಟ್ಟುಕೊಂಡಳು. ಚಂದಿರೆಯು ಅಲ್ಲಿಯೇ ನಿಂತು ಈ ಆನಂದ ಲಹರಿಯನ್ನು ನೋಡುತ್ತ ಬೆರಗಾದಳು. ಪ್ರಮದೆಯು ರಂಗೀಲಾಲನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಾಡುತ್ತಿರುವಲ್ಲಿ, ಚಂಪಕೆಯೂ ಅಲ್ಲಿಗೆ ಓಡಿಬಂದಳು. ಪ್ರಮದೆಯು ಅವಳನ್ನೂ ತೊಡೆಯ ಮೇಲೇರಿಸಿಕೊಂಡು, ಅವಳ ಮುದ್ದಾದ ಮುಖ ಮಂಡಲವನ್ನು ಕೈಯಲ್ಲಿ ಹಿಡಿದು ಮುದ್ದಿಸಿ ಅವಳ ಮುಂಗುರುಳನ್ನು ನೇವರಿಸುತ್ತ, ದುಃಖವೂ ಆನಂದವೂ ಒಂದುಗೂಡಿ ಧಾರೆ ಧಾರೆಯಾಗಿ ಹರಿಯುತ್ತಿರುವ ಕಣ್ಣೀರನ್ನು ಮಧ್ಯೇ ಮಧ್ಯೇ ಸೆರಗಿನಿಂದ ಒರಸಿಕೊಳ್ಳುತ್ತ, ಆ ಬಾಲಕ ಬಾಲಿಕೆಯರನ್ನು ಪದೇ ಪದೇ ನೋಡುತ್ತ ಕುಳಿತುಕೊಂಡಳು. ಸ್ವೇಚ್ಛಾ ಪ್ರವರ್ತಕಳಾಗಿದ್ದ ಚಂದಿರೆಯು ಇದೆಲ್ಲವನ್ನೂ ನೋಡಿ ತನ್ನ ಮನಸ್ಸಿನಲ್ಲಿ, "ಆಹಾ! ಇದೇ ನಿಜವಾದ ಆನಂದ, ನಿಷ್ಕಲ್ಮಷವಾದ ಪ್ರೇಮ; ಸ್ತ್ರೀ ಜನ್ಮಕ್ಕೆ ನಿರ್ದುಷ್ಟವಾದ, ನಿಷ್ಕಳಂಕವಾದ ಸ್ವರ್ಗ ಸೌಖ್ಯ; ಅಯ್ಯೋ! ನಾನೆಂತಹ ನೀಚಳು! ಉತ್ತಮೋತ್ತಮವಾದ ನವ ಯೌವನದ ಸೊಬಗನ್ನು ಅಧಮಾಧಮ ವೃತ್ತಿಯೆಂಬ ಬೆಂಕಿಯಲ್ಲಿ ಸುಟ್ಟು ಬೂದಿಮಾಡಿದೆನು. ನನ್ನ ಜನ್ಮವನ್ನು ಸುಡಬೇಕು", ಹೀಗೆಂದು ಯೋಚಿಸುತ್ತ ಕಣ್ಣೀರು ಸುರಿಸುತ್ತಿದ್ದಳು. ಪ್ರಮದೆಯು ಅವಳನ್ನು ಕುರಿತು, "ಚಂದ್ರಾ, ನೋಡಿದೆಯಾ ನಮ್ಮ ಬಡವರ ಸೌಖ್ಯವನ್ನು? ಇದಕ್ಕಿಂತಲೂ ಅತಿಶಯವಾದ ಸೌಖ್ಯವು ಮೋಕ್ಷದಲ್ಲಿಯೂ ಇಲ್ಲ.

ಯಾವ ನಾರೀಮಣಿಯು ತನ್ನ ಪತಿಯಿಂದ ವಂಚಿತಳಾಗದೆ, ತ್ರಿಕರಣ ಶುದ್ಧಿಯಿಂದ ನಿಷ್ಕಲ್ಮಷವಾದ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ಗೃಹಿಣಿ, ಸಹಧರ್ಮಿಣಿ, ಅರ್ಧಾಂಗಿ—ಇತ್ಯಾದಿ ಸನ್ನಾಮಧೇಯಗಳು ಅನ್ವರ್ಥವಾಗುವಂತೆ ನಡೆದುಕೊಳ್ಳುತ್ತ, ಆತನೇ ಸರ್ವ ಸೌಖ್ಯ ದಾತನೆಂದೂ, ಸದ್ಗತಿ ದಾಯಕನೆಂದೂ ತಿಳಿದುಕೊಂಡು, ಪಾಪ ಕಾರ್ಯಗಳನ್ನು ಕನಸಿನಲ್ಲಿಯೂ ಸ್ಮರಿಸದೆ, ಸೀತಾದೇವಿ, ಸಾವಿತ್ರಿ, ಅನಸೂಯೆ ಮುಂತಾದ ಪತಿವ್ರತಾ ಶಿರೋಮಣಿಗಳಂತೆ ಸರ್ವದಾ ಗೃಹವನ್ನಲಂಕರಿಸುತ್ತಿರುವಳೋ ಅವಳೇ ಧನ್ಯಳು, ಅವಳೇ ಲೋಕಮಾನ್ಯಳು. ಇದಕ್ಕೆ ಯಾವ ವಿಧದಲ್ಲಿಯಾದರೂ ವ್ಯತಿರಿಕ್ತವಾಗಿ ನಡೆದರೆ ಅವಳು ದುರಂತವಾದ ನರಕ ಯಾತನೆಯನ್ನನುಭವಿಸುವಳು. ಇಹದಲ್ಲಿ ಅವಳಿಗೆ ಸೌಖ್ಯವೆಂಬುದು ಕನಸಿನಲ್ಲಿಯೂ ದುರ್ಲಭ. ನಾನು ನನ್ನ ಪತಿಯೊಡನೆ ಸ್ವಲ್ಪ ನಿಷ್ಠುರ ವಾಕ್ಯಗಳನ್ನಾಡಿದುದಕ್ಕೆ ಅನುಭವಿಸಿದ ಕಷ್ಟ ಪರಂಪರೆಗಳನ್ನು ನೀನು ನೋಡಿಯೂ ಕೇಳಿಯೂ ಇರುವೆ? ಇನ್ನು ಹೆಚ್ಚು ಹೇಳುವುದರಿಂದೇನು?" ಎಂದು ಮರಳಿ ತನ್ನ ಮಗುವನ್ನು ಮುದ್ದಿಟ್ಟುಕೊಂಡಳು.

ವಾಚಕ ಮಹಾಶಯರು ನಾವು ಮೊದಲನೆಯ ಪರಿಚ್ಛೇದದಲ್ಲಿ ಹೇಳಿರುವುದನ್ನು ಇನ್ನೊಂದು ಸಾರಿ ತಮ್ಮ ಸ್ಮೃತಿ ಪಥಕ್ಕೆ ತಂದುಕೊಳ್ಳಬೇಕು. ಅಲ್ಲಿ ಹೇಳಿರುವಂತೆ, ಪ್ರಮದೆಯು ಒಂದು ದಿನ ಮಧ್ಯಾಹ್ನದ ವೇಳೆಯಲ್ಲಿ ಅಡಿಗೆಯನ್ನು ಮುಗಿಸಿ, ಯಮುನಾ ತೀರಕ್ಕೆ ಬಂದಾಗ, ಒಬ್ಬ ಬೈರಾಗಿಯೂ ಆತನ ಶಿಷ್ಯನೂ ಅಲ್ಲಿಗೆ ಬಂದುದೂ, ಆ ಶಿಷ್ಯನೇ ಪ್ರಮದೆಯ ಪತಿಯೆಂಬುದೂ ವಾಚಕರ ಜ್ಞಪ್ತಿಯಲ್ಲಿರಬಹುದು. ಈ ಹಿಂದೆ ವಿವರಿಸಿದಂತೆ, ಪ್ರಮದೆಯು ವಿಪತ್ತಿನಿಂದ ಪಾರುಗಂಡು ತನ್ನ ಮನೆಗೆ ಬಂದ ಮೇಲೆ ಎಂಟು ದಿನಗಳಾದನಂತರ ಪ್ರಥಮ ಪರಿಚ್ಛೇದದಲ್ಲಿ ಹೇಳಿರುವ ಸಂಗತಿಗಳು ನಡೆದುದು.

ತನ್ನ ಪತಿಯು ಎದುರಿಗೆ ನಿಂತಿರುವುದನ್ನು ಕಾಣುತ್ತಲೆ ಪ್ರಮದೆಯು ನಾಚಿಕೆಯಿಂದ ತಲೆಬಗ್ಗಿಸಿ ನಿಂತುಕೊಂಡಿದ್ದಳು. ಅವಳಿಗೆ ಆನಂದವೇ ಹೆಚ್ಚಾಗಿದ್ದಿತೊ ನಾಚಿಕೆಯೇ ಹೆಚ್ಚಾಗಿದ್ದಿತೊ ಹೇಳಲು

ಸಾಧ್ಯವಿಲ್ಲ. ಬೈರಾಗಿಯು ಪತಿ ಪತ್ನಿಯರಿಬ್ಬರನ್ನೂ ಅಲ್ಲಿಯೇ ಬಿಟ್ಟು ಕುಟೀರದ ಕಡೆಗೆ ಹೊರಟುಹೋದನು. ಆತನು ಕಣ್ಮರೆಯಾದ ಮೇಲೆ ಆನಂದಸಿಂಹನು ನಸು ನಗೆಯಿಂದ ಕೂಡಿದವನಾಗಿ, "ಪ್ರಮದಾ! ನನ್ನನ್ನು ಮರೆತುಬಿಟ್ಟೆಯೋ ಏನು? ನಿನ್ನ ಅಪ್ಪಣೆಯಿಲ್ಲದೆ ನಾನು ಇಲ್ಲಿಗೆ ಬಂದುದಕ್ಕಾಗಿ ನಿನಗೆ ಕೋಪ ಬಂದಿದ್ದರೆ ದಯವಿಟ್ಟು ಕ್ಷಮಿಸು" ಎಂದನು. ಪ್ರಮದೆಯು ಪ್ರಮೋದ ಮಯವಾದ ಕಟಾಕ್ಷವನ್ನು ಬೀರುತ್ತ, "ಪ್ರಾಣ ಕಾಂತಾ! ಈಗಿನ ಅತ್ಯಾನಂದ ಸಮಯದಲ್ಲಿಯೂ ತಾವು ತಮ್ಮ ವ್ಯಂಗ್ಯೋಕ್ತಿಯನ್ನು ಬಿಡುವುದಿಲ್ಲವೆ?" ಎನ್ನಲು, ಆನಂದಸಿಂಹನು ಆ ಕಡೆಗಣ್ಣ ನೋಟದ ಹೊಡೆತದಿಂದ ಸೋತುಹೋದವನಾಗಿ, ಮುಂದೆ ಬಂದು ತನ್ನ ಪತ್ನಿಯನ್ನು ಆಲಿಂಗಿಸಿಕೊಂಡು, "ಪ್ರಮದಾ! ನಿನ್ನ ಪ್ರಿಯತಮ ವಸ್ತುವಾದ ಕೋಹಿನೂರು ರತ್ನವು ನಿನ್ನ ಹಸ್ತಗತವಾಯಿತಲ್ಲವೆ? ನಾನಿನ್ನು ನಿಶ್ಚಿಂತನಾದೆನು" ಎಂದನು. ಪ್ರಮದೆಯು ದೈನ್ಯ ಭಾವದಿಂದ, "ಪ್ರಾಣ ನಾಥಾ, ತಾವು ದಯವಿಟ್ಟು ನನ್ನನ್ನು ಕ್ಷಮಿಸುವುದಿಲ್ಲವೆ?" ಎಂದು ಕೇಳಲು ಆನಂದಸಿಂಹನು, "ಪ್ರಿಯೇ! ಹಾಗೆಂದು ನಾನು ಹೇಳಬೇಕೆ?" ಎನ್ನುತ್ತ ಪತ್ನಿಯನ್ನು ಮುತ್ತಿಟ್ಟುಕೊಂಡನು. ಅವರಿಬ್ಬರೂ ಆಗ ಆನಂದ ಸಾಗರದಲ್ಲಿ ಮುಳುಗಿ ತೇಲಾಡುತ್ತಿದ್ದರೆಂದು ಬೇರೆ ಹೇಳಬೇಕಾದುದಿಲ್ಲ.

ಪ್ರಮದೆ.—ಹಾಗಾದರೆ, ಆ ಪರಮ ಪೂಜ್ಯನೂ ನನ್ನ ಬಂಧ ಮೋಚಕನೂ ಪಿತೃ ಸಮಾನನೂ ಆದ ಆ ಬೈರಾಗಿಯು ಯಾರು?

ಆನಂದ.—ಅಯ್ಯೋ ಮರುಳೇ! ಇಷ್ಟಾದರೂ ತಿಳಿಯಲಿಲ್ಲವೆ? ತನ್ನ ಪ್ರಜೆಗಳ ಕಷ್ಟವನ್ನು ನಿವಾರಿಸುವುದೇ ತನ್ನ ಮುಖ್ಯ ಕರ್ತವ್ಯವೆಂದು ತಿಳಿದು ಅಹೋರಾತ್ರಿಯೂ ತನ್ನ ತನು ಮನ ಧನಗಳನ್ನು ಪರೋಪಕಾರಕ್ಕಾಗಿಯೇ ವ್ಯಯಮಾಡುತ್ತಿರುವ ನಮ್ಮ ರಾಜನಾದ ಬಾಬರ ಮಹಾಶಯನಲ್ಲವೆ?

ಪ್ರಮದೆ.—ನನಗೂ ಹಾಗೆಯೇ ತೋರಿತು; ಆದರೆ....

ಆನಂದ.—ಆದರೆ ಏನು? ಮತ್ತೇನು? ನನ್ನನ್ನು ಇನ್ನೂ ಪರೀಕ್ಷಿಸುತ್ತಿರುವೆಯೋ?

ಪ್ರಮುದೆ.—(ಪತಿ ಪತ್ನಿಯರಲ್ಲಿರುವ ನಿಷ್ಕಪಟವಾದ ವಿನೋದದಿಂದ) ಹೂಂ..! ಪರೀಕ್ಷೆ! ಪರೀಕ್ಷೆ!! ತಾವು ಇನ್ನೂ ಮರ್ಮೋದ್ಘಾಟನೆಯನ್ನು ಬಿಡಲಿಲ್ಲ; ಇನ್ನುಮುಂದೆ ದಯವಿಟ್ಟು ಹೀಗೆ ಮಾಡಬೇಡಿರಿ.

ಹೀಗೆ ಆ ದಂಪತಿಗಳಿಬ್ಬರೂ ಸರಸವಾಡುತ್ತ ತಮ್ಮ ಕುಟೀರದ ಸಮೀಪಕ್ಕೆ ಬಂದರು. ಬಾಬರ ಮಹಾಶಯನು ಬೈರಾಗಿಯ ವೇಷವನ್ನು ತೆಗೆದುಹಾಕಿ ನಿಜ ರೂಪವನ್ನು ಧರಿಸಿ ಕುಟೀರದ ಮುಂಭಾಗದಲ್ಲಿ ಕುಳಿತು ರಂಗೀಲಾಲನನ್ನೂ ಬಾಲಿಕೆಯನ್ನೂ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ವಿನೋದವಾಡುತ್ತಿದ್ದನು. ಒಳಗೆ ಪ್ರಮುದೆಯು ದೊಡ್ಡತ್ತೆಯೆಂದು ಹೇಳಿ ಕೊಂಡಿದ್ದ ಮುದುಕಿಯೂ ಆಕೆಯ ಪಕ್ಕದಲ್ಲಿ ನಗೆ ಮುಖದಿಂದ ಕೂಡಿದ ಚಂದಿರೆಯೂ ನಿಂತುಕೊಂಡು ಆ ವಿನೋದವನ್ನು ನೋಡುತ್ತಿದ್ದರು. ಇಷ್ಟರಲ್ಲಿ, ಯಮುನಾ ನದಿಯ ಕಡೆಯಿಂದ ಪ್ರಮುದಾ ಕುಮಾರಿಯೂ ಆನಂದ ಸಿಂಹನೂ ಹರ್ಷ ಚಿತ್ತರಾಗಿ ಬರುತ್ತಿದ್ದರು. ಬಾಬರನು ಅವರನ್ನು ನೋಡಿ, "ಓಹೋ! ದಯಮಾಡಿಸಬೇಕು. ನೀವಿಬ್ಬರೂ ಪ್ರತಿಜ್ಞೆಮಾಡಿ, ಕೊಲ್ಲಬೇಕೆಂದು ಹವಣಿಸುತ್ತಿದ್ದ ಆ ಬಾಬರನು ಅಸಹಾಯನಾಗಿ ಒಬ್ಬನೇ ನಿಮ್ಮ ಮನೆಯಲ್ಲಿ ಈಗ ನಿಮಗೆ ನಿರಾಯಾಸ ವಾಗಿ ದೊರೆತಿರುವನು. ನಿಮ್ಮ ಪ್ರತಿಜ್ಞೆಯನ್ನು ಪೂರ್ತಿಮಾಡಿಕೊಳ್ಳಲು ಇದು ಸುಸಮಯ" ಎಂದನು. ಆನಂದ ಸಿಂಹನೂ ಪ್ರಮುದೆಯೂ ತಮ್ಮ ಅವಿವೇಕಕ್ಕಾಗಿ ಮುಖವನ್ನು ಮೇಲಕ್ಕೆತ್ತಲಾರದೆ, ಆನಂದವೂ ದುಃಖವೂ ಮಿಶ್ರವಾದ ಮನೋ ಭಾವದಿಂದ ಕಣ್ಣೀರು ಸುರಿಸುತ್ತ, ನೆಲಕ್ಕೆ ಮೊಳಕಾಲೂರಿ ತಲೆ ಬಗ್ಗಿಸಿ, ಅತ್ಯಂತ ದೈನ್ಯದೋರಿ, "ಮಹಾ ಪ್ರಭೋ! ಅಜ್ಞಾನದಿಂದ ನಾವು ಇದುವರೆಗೆ ಮಾಡಿದ ಸರ್ವಾಪರಾಧ ಗಳನ್ನೂ ದಯವಿಟ್ಟು ಕ್ಷಮಿಸಿ ತಮ್ಮ ಸೇವಕರನ್ನು ಕರುಣಿಸಬೇಕು" ಎಂದು ಅಂಜಲಿ ಬದ್ಧರಾಗಿ ಬೇಡಿಕೊಂಡರು. ಉದಾರ ಹೃದಯನಾದ ಬಾಬರನು ಆನಂದ ಸಿಂಹನನ್ನು ಕುರಿತು, "ಅಯ್ಯಾ, ಕ್ಷಮಿಸುವುದಕ್ಕೆ ನಾನೆಷ್ಟರವನು? ಸರ್ವ ಪ್ರಾಣಿಗಳ ಮಹಾಪರಾಧಗಳನ್ನು ಕ್ಷಮಿಸಲು ಶಕ್ತನಾದವನು ಆ ಭಗವಂತನೊಬ್ಬನೇ. ನೀನು ಯಾವಾಗ ನನ್ನ ಅಂಗ ರಕ್ಷಣೆಯ ಮಹತ್ಕಾರ್ಯವನ್ನು ಕೈಕೊಂಡೆಯೋ ಆಗಲೇ ನಿನ್ನ

ಸರ್ವಾಪರಾಧಗಳನ್ನೂ ಆ ಭಗವಂತನೇ ಕ್ಷಮಿಸಿರುವನು. ಇನ್ನು ನಿನ್ನ ಪತ್ನಿಯ ವಿಚಾರದಲ್ಲಿ, ಆಕೆಯ ಸರ್ವಾಪರಾಧಗಳನ್ನೂ ಮನ್ನಿಸಿ ಕಾಪಾಡತಕ್ಕವನು ನೀನೇ ಇರುವೆ. ಹೀಗಿರುವಲ್ಲಿ, ಕ್ಷಮಿಸಲು ನಾನು ಹೇಗೆ ಶಕ್ತನು? ಆದರೂ ಲೋಕ ವ್ಯವಹಾರವನ್ನು ಹಿಡಿದು, ನಿಮ್ಮಿಬ್ಬರ ಅಪರಾಧಗಳನ್ನೂ ಮನಃಪೂರ್ತಿಯಾಗಿ ಮನ್ನಿಸಿರುವೆನು" ಎಂದನು ಇಷ್ಟರಲ್ಲಿ ಯುವರಾಜನಾದ ಹುಮಾಯೂನನೂ ಅಲ್ಲಿಗೆ ಬಂದು ಸೇರಿದನು. ಆನಂದ ಸಿಂಹನೂ ಪ್ರಮದಾ ಕುಮಾರಿಯೂ ತಮ್ಮ ಅನುಕೂಲ್ಯಗಳಿರುವ ಮಟ್ಟಿಗೆ ತಮ್ಮ ದೊರೆಯನ್ನೂ ಯುವರಾಜನನ್ನೂ ಅತ್ಯಂತ ಆದರದಿಂದಲೂ ವಿನಯದಿಂದಲೂ ಗೌರವಿಸಿ ಔತಣ ಮಾಡಿದರು. ಭೋಜನಾನಂತರ ಎಲ್ಲರೂ ಒಂದು ಕಡೆಯಲ್ಲಿ ಸೇರಿ ವಿನೋದವಾಗಿ ಮಾತನಾಡುತ್ತ ಕುಳಿತುಕೊಂಡರು. ದೇಶಕ್ಕೊಡೆಯನಾದ ಅಂತಹ ಪರಾಕ್ರಮಶಾಲಿಯು, ತಮ್ಮಂತಹ ಸಾಮಾನ್ಯರು ಮಾಡಲೆಳಸಿದ ಕ್ಷಮಾರ್ಹವಲ್ಲದ ರಾಜದ್ರೋಹಕ್ಕೆ ಕ್ರೂರ ದಂಡನೆಯನ್ನು ವಿಧಿಸುವುದಕ್ಕೆ ಪ್ರತಿಯಾಗಿ, ಅಸಾಧಾರಣವಾದ ಕ್ಷಮಾಗುಣವನ್ನು ತೋರಿ, ಮಹತ್ತರವಾದ ಉಪಕಾರವನ್ನು ಮಾಡಿ, ತಮ್ಮ ಸ್ನೇಹಿತನಂತೆ ವರ್ತಿಸುತ್ತಿರುವುದನ್ನು ನೋಡಿ ಆನಂದ ಸಿಂಹನೂ ಪ್ರಮದಾ ಕುಮಾರಿಯೂ ಅಪಾರವಾದ ಆನಂದದ ಕಡಲಿನಲ್ಲಿ ಓಲಾಡುತ್ತಿದ್ದರು.

ಬಾಬರನು ಊಹಿಸಿದ್ದಂತೆಯೇ, ಪ್ರಮದೆಯು ಕೋಹಿನೂರು ರತ್ನವನ್ನು ಬಾಬರ ಮಹಾಶಯನಿಗೆ ಬಹಳ ಭಕ್ತಿಯಿಂದ ಒಪ್ಪಿಸಿದಳು. ಬಾಬರನೂ ಈ ಸಮಾರಂಭದ ಜ್ಞಾಪಕಾರ್ಥವಾಗಿ ಆನಂದ ಸಿಂಹನಿಗೆ ಒಂದು ದೊಡ್ಡ ಗ್ರಾಮವನ್ನು ಉಂಬಳಿ ಹಾಕಿ ಕೊಟ್ಟನು. ಆ ಮಹಾನುಭಾವನು ಚಂದಿರೆಯನ್ನೂ ಮರೆಯಲಿಲ್ಲ; ಪ್ರಭಾಕರ ಸಿಂಹನೆಂಬ ಒಬ್ಬ ರಾಜಪೂತ ಶಿಪಾಯಿಯೊಡನೆ ಅವಳ ಲಗ್ನ ಸಮಾರಂಭವು ನೆರವೇರುವಂತೆ ಮಾಡಿದನು. ಚಂದಿರೆಯು ಅಂದಿನಿಂದ ಸಂಸಾರ ಗ್ರಹಣ ಮಾಡಿ ಉತ್ತಮ ಗೃಹಿಣಿಯೆಂದೆನಿಸಿಕೊಂಡಳು.